ಹಂಪಿ ಕನ್ನಡ ವಿಶ್ವವಿದ್ಯಾನಿಲಯ
ಕಾವ್ಯಮಂಡಲ
(ಕನ್ನಡ ಅಧ್ಯಯನ ಮತ್ತು ಸಂಶೋಧನ ಕೇಂದ್ರ, ಬೆಂಗಳೂರು)

# ಕನಕದಾಸರ ರಾಮಧಾನ್ಯ ಚರಿತೆ - ಪುರಾಣ ಮತ್ತು ಪ್ರಸ್ತುತತೆ

(ಕನ್ನಡ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ ಸಂಪ್ರಬಂಧ)

ಪ್ರೊ। ಕಿ.ರಂ. ನಾಗರಾಜು
ನಿರ್ದೇಶಕರು
ಕಾವ್ಯಮಂಡಲ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು

ಮಾರ್ಗದರ್ಶಕರು

ಡಾ। ಬಸವರಾಜ ಕಲ್ಗುಡಿ
ನಿರ್ದೇಶಕರು
ಕನ್ನಡ ಅಧ್ಯಯನ ಕೇಂದ್ರ,
ಜ್ಞಾನಭಾರತಿ, ಬೆಂಗಳೂರು

ಸಂಪ್ರಬಂಧಕಾರ

ವೀರೇಂದ್ರ ಜಿ.ಜೆ
ಎಂ.ಫಿಲ್. ವಿದ್ಯಾರ್ಥಿ
ಕಾವ್ಯಮಂಡಲ
ಬೆಂಗಳೂರು







2006 - 07

ಕಾವ್ಯಮಂಡಲ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ಬೆಂಗಳೂರು

ಸಂಪೂರ್ಣ ಸಂ.ಕ. ಆಹಿಟಿ

208

ಹಂಪಿ ಕನ್ನಡ ವಿಶ್ವವಿದ್ಯಾನಿಲಯ
ಕಾವ್ಯಮಂಡಲ
(ಕನ್ನಡ ಅಧ್ಯಯನ ಮತ್ತು ಸಂಶೋಧನ ಕೇಂದ್ರ, ಬೆಂಗಳೂರು)

# ಕನಕದಾಸರ ರಾಮಧಾನ್ಯ ಚರಿತೆ - ಪುರಾಣ ಮತ್ತು ಪ್ರಸ್ತುತತೆ

(ಕನ್ನಡ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ ಸಂಪ್ರಬಂಧ)

ಪ್ರೊ। ಕಿ.ರಂ. ನಾಗರಾಜು
ನಿರ್ದೇಶಕರು
ಕಾವ್ಯಮಂಡಲ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು

ಮಾರ್ಗದರ್ಶಕರು

ಡಾ। ಬಸವರಾಜ ಕಲ್ಗುಡಿ
ನಿರ್ದೇಶಕರು
ಕನ್ನಡ ಅಧ್ಯಯನ ಕೇಂದ್ರ
ಜ್ಞಾನಭಾರತಿ, ಬೆಂಗಳೂರು

ಸಂಪ್ರಬಂಧಕಾರ

ವೀರೇಂದ್ರ ಜಿ.ಜೆ
ಎಂ.ಫಿಲ್. ವಿದ್ಯಾರ್ಥಿ
ಕಾವ್ಯಮಂಡಲ
ಬೆಂಗಳೂರು




2006 - 07

ಕಾವ್ಯಮಂಡಲ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ಬೆಂಗಳೂರು

<u>ದೃಢೀಕರಣ ಪತ್ರ</u>

**ಕನಕದಾಸರ ರಾಮಧಾನ್ಯ ಚರಿತೆ - ಪುರಾಣ ಮತ್ತು ಪ್ರಸ್ತುತತೆ** ಎಂಬ ವಿಷಯವನ್ನು ಕುರಿತು ವೀರೇಂದ್ರ ಜಿಜೆ ಅವರು ೨೦೦೬-೦೭ನೇ ಸಾಲಿನಲ್ಲಿ ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಕಾವ್ಯಮಂಡಲ, ಹಂಪಿ ವಿಶ್ವವಿದ್ಯಾನಿಲಯಕ್ಕೆ ಕನ್ನಡದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಸ್ವತಃ ಅವರೇ ಸಿದ್ಧಪಡಿಸಿದ್ದಾರೆ. ಇದರಲ್ಲಿ ವ್ಯಕ್ತವಾದ ಅಭಿಪ್ರಾಯಗಳು ಸಂಪ್ರಬಂಧಕಾರರದ್ದಾಗಿದೆ. ಇದು ಇಡಿಯಾಗಿ ಇಲ್ಲವೆ, ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 17. 8
ಸ್ಥಳ : ಬೆಂ

ಮಾರ್ಗದರ್ಶಕರು
17.8
**ಡಾ। ಬಸವರಾಜ ಕಲ್ಗುಡಿ**
ಕಾವ್ಯಮಂಡಲ, ಬೆಂಗಳೂರು

# ಘೋಷಣಾ ಪತ್ರ

"ಕನಕದಾಸರ ರಾಮಧಾನ್ಯ ಚರಿತೆ - ಪುರಾಣ ಮತ್ತು ಪ್ರಸ್ತುತತೆ" ಎಂಬ ವಿಷಯವನ್ನು ಕುರಿತು ವೀರೇಂದ್ರ ಜಿಜೆ. ಆದ ನಾನು ೨೦೦೬-೦೭ನೇ ಸಾಲಿನ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಾದ ಕಾವ್ಯಮಂಡಲದಲ್ಲಿ ಕನ್ನಡ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಪ್ರೊ। ಕಿ.ರಂ. ನಾಗರಾಜು, ನಿರ್ದೇಶಕರು, ಕಾವ್ಯಮಂಡಲ ಮತ್ತು ಮಾರ್ಗದರ್ಶಕರು, ಡಾ। ಬಸವರಾಜ ಕಲ್ಗುಡಿ, ನಿರ್ದೇಶಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾನಿಲಯ - ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೭/೦೮/೨೦೦೭

ಸ್ಥಳ : ಬೆಂಗಳೂರು

ಸಂಪ್ರಬಂಧಕಾರ

(ವೀರೇಂದ್ರ ಜಿ.ಜೆ.)

ಎಂ.ಫಿಲ್. ವಿದ್ಯಾರ್ಥಿ

ಕಾವ್ಯಮಂಡಲ

ಬೆಂಗಳೂರು

# ಪರಿವಿಡಿ


೧. ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ ೧ - ೫

೨. ಈವರೆಗೆ ನಡೆದುಬಂದಿರುವ ಅಧ್ಯಯನಗಳ ಒಂದು ಪಕ್ಷಿನೋಟ ೬ -೧೬

೩. ಕನಕದಾಸರ ಕಾವ್ಯಗಳ ಪೌರಾಣಿಕ ವಸ್ತುವಿನಲ್ಲಿ ಕಾಣುವ ಮಾನವೀಯ ನೆಲೆಗಳು

- ಅ) ಮೋಹನ ತರಂಗಿಣಿ ೧೭-೨೪
- ಆ) ಹರಿಭಕ್ತಿಸಾರ ೨೫-೩೦
- ಇ) ರಾಮಧಾನ್ಯ ಚರಿತೆ ೩೧-೩೪
- ಈ) ಕೀರ್ತನೆಗಳು ೩೫-೩೯

೪. ರಾಮಧಾನ್ಯ ಚರಿತೆ - ಸಾಮಾಜಿಕ ಮತ್ತು ಪೌರಾಣಿಕ ಅಂಶಗಳು ೪೦-೫೮

೫. ರಾಮಧಾನ್ಯ ಚರಿತೆಯಲ್ಲಿ ಕಾಣುವ ಮಾನವೀಯ ನೆಲೆಯ ಸ್ವರೂಪ ಪುರಾಣ ಮತ್ತು ವರ್ತಮಾನವನ್ನು ಭಿನ್ನವಾಗಿ ಕಟ್ಟಿಕೊಡುವ ರೀತಿ ೫೯-೭೦

೬. ಉಪ ಸಂಹಾರ ೭೧-೭೫

೭. ಗ್ರಂಥಋಣ ೭೬

# ಅಧ್ಯಾಯ - ಒಂದು

## ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯದ ಕಾಲವು ಕೂಡ ಮಹತ್ವದ ಹಾಗೂ ತನ್ನದೇಯಾದ ವಿಶಿಷ್ಟ ನೆಲೆ - ಚೆಲೆಗಳನ್ನು ಉಳಿಸಿಕೊಂಡು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಯಶಸ್ವಿಯಾಗಿದೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಶರಣರು ಧರ್ಮದ ಮೂಲಕ ಶ್ರೀಸಾಮಾನ್ಯರ ಬದುಕನ್ನು ಉತ್ತಮೀಕರಿಸಲು ಯತ್ನಿಸಿದರು. ಹಾಗೆಯೇ ೧೫-೧೬ನೇ ಶತಮಾನದಲ್ಲಿದ್ದ ಹರಿದಾಸರು ಹರಿಭಕ್ತಿಯ ಮೂಲಕ ಶ್ರೀಸಾಮಾನ್ಯರ ಬದುಕನ್ನು ಹಸನುಗೊಳಿಸಲು ಶ್ರಮಿಸಿದರು. ಅದರ ಫಲವಾಗಿ ಕನ್ನಡದಲ್ಲಿ ಭಕ್ತಿ ಸಾಹಿತ್ಯ ಶ್ರೀಮಂತವಾಯಿತು. ಹರಿದಾಸರು ತಮ್ಮ ಕೀರ್ತನೆ ಹಾಗೂ ಕೃತಿಗಳ ಮೂಲಕ ಜನಸಾಮಾನ್ಯರಲ್ಲಿದ್ದ ಅಜ್ಞಾನ, ಅಸಮಾನತೆಯನ್ನು ತೊಡೆದು ಹಾಕಲು ಶ್ರಮಿಸಿದರು. ಹರಿದಾಸರು ಜನಪದರ ಸರಳ ಭಾಷೆಯಲ್ಲಿ ತಮ್ಮ ಹರಿಭಕ್ತಿಯನ್ನು ಕೀರ್ತನಾ ಸಾಹಿತ್ಯದ ಮೂಲಕ ಪ್ರಚಾರ ಮಾಡುವ ಜೊತೆಗೆ ಶ್ರೀಸಾಮಾನ್ಯನ ಜೊತೆ ಬದುಕಿದ್ದು, ಸಮಾಜದ ಅಂಧಾನುಕರಣೆಗಳನ್ನು ಖಂಡಿಸಲು ಸಾಧ್ಯವಾಯಿತು. ಇಂತಹ ಹರಿದಾಸ ಪರಂಪರೆಯಲ್ಲಿ ಜನಪದರ ನಾಲಿಗೆಯಲ್ಲಿ ಉಳಿದವರು ಕನಕ-ಪುರಂದರದಾಸರು ಮಾತ್ರ ಎಂದರೆ ಅದು ಅತಿಶಯೋಕ್ತಿಯಾಗಲಾರದು.

ದಾಸ ಸಾಹಿತ್ಯ ಪರಂಪರೆಯಲ್ಲಿ ದಾಸರಾಗಿ - ದಾರ್ಶನಿಕರಾಗಿ, ಕವಿಯಾಗಿ, ಸಂತರಾಗಿ, ಜ್ಞಾನಿಯಾಗಿ, ಮಹಾ ಮೇಧಾವಿಯಾಗಿ ಮತ್ತು ಪವಾಡ ಪುರುಷರಾಗಿಕಂಡು ಬರುವುದು ಕನಕದಾಸರು ಎಂಬುದು ಕನ್ನಡಿಗರು ಬಲ್ಲ ವಿಷಯವೆ. ಕನಕದಾಸರು ಕ್ರಿ.ಶ. ೧೪-೧೫ನೇ ಶತಮಾನದಲ್ಲಿದ್ದ ಮಾನವಶ್ರೇಷ್ಠರು. ಅಂದಿನ ಸಾಮಾಜಿಕ ಸಾಂಸ್ಕೃತಿಕ ಜನ ಜೀವನದಲ್ಲಿನ ಹಲವಾರು ವಿಷಯಗಳನ್ನು ಕನಕದಾಸರು ತಮ್ಮ ಸಾಹಿತ್ಯದಲ್ಲಿ ಸೆರೆಹಿಡಿದಿದ್ದಾರೆ. ಸಾಹಿತ್ಯ ದೃಷ್ಟಿಯಿಂದ ದಾಸ ಸಾಹಿತ್ಯ ಪರಂಪರೆಯಲ್ಲಿ ತಮ್ಮದೇ ಆದ ನೆಲೆ-ಬೆಲೆಗಳ ಜೊತೆಗೆ ಮೌಲ್ಯಯುತವಾದ ಸ್ಥಾನ ಪಡೆದಿದ್ದಾರೆ. ಅವರು ಜನ ಸಾಮಾನ್ಯರ ಭಾಷೆಯಾದ ಕನ್ನಡದಲ್ಲಿಯೇ ಕೃತಿ ರಚಿಸಿ ಅಮರರಾಗಿದ್ದಾರೆ.

ಈ ಹರಿದಾಸ ಪರಂಪರೆಯಲ್ಲಿ ಒಡಕು ಭಾವನೆ ಬಂದು ಎರಡಾಯಿತು. ೧) ದಾಸಕೂಟ ೨) ವ್ಯಾಸಕೂಟ. ಈ ರೀತಿಯಾಗಿ ಎರಡು ಭಾಗವಾದ್ದರಿಂದ ದಾಸಕೂಟ ಪರಂಪರೆಯಲ್ಲಿ ಕನಕ ಪುರಂದರದಾಸರು ಮೊದಲಾದರೆ, ವ್ಯಾಸಕೂಟದಲ್ಲಿ ವ್ಯಾಸತೀರ್ಥರು ಇತ್ಯಾದಿಯಾಗಿ ವ್ಯಾಸಕೂಟವಾಯಿತು. ದಾಸಕೂಟ ಪರಂಪರೆಗೆ ಸೇರಿದವರಾದ ಕನಕದಾಸರು ಜನಸಾಮಾನ್ಯರ ಬಳಿಯಲ್ಲಿಯೇ ಇದ್ದು ಕನ್ನಡದಲ್ಲಿಯೇ ಸಾಹಿತ್ಯ ಸೇವೆಗೈದುದು ಮತ್ತು ಭಕ್ತಿ ಸಾಹಿತ್ಯವನ್ನು ಜನಸಾಮಾನ್ಯರ ಮನೆಬಾಗಿಲಿಗೆ ಹೊತ್ತೊಯ್ಯುವ ಮಾರ್ಗ ಅನುಸರಿಸಿದರು.

ಪುರಾಣಭಾರತ ಕಾಲದಿಂದಲೂ ಭಾರತೀಯರಲ್ಲಿ ಸಮಾಜದ ಅಸಮಾನತೆಯು ಎದ್ದು ಕಾಣುತ್ತದೆ. ಅದು ವರ್ಗ, ವರ್ಣ, ಜಾತಿ-ಮತ, ಜ್ಞಾನ, ಸ್ಪೃಶ್ಯತೆಗಳಾದಿಯಾಗಿ ಸಮಾಜದಲ್ಲಿ ಅಸಮಾನತೆಯು ಅಂದಂದಿನ ಕಾಲದಲ್ಲಿ ಕಂಡುಬಂದಿದೆ. ಈ ಮೇಲಿನ ಅಂಶಗಳು ಇಂದಿಗೂ ಸಮಾಜ ಜೀವನದಲ್ಲಿ ಎಲ್ಲಾ ಕ್ಷೇತ್ರದಲ್ಲಿಯೂ, ಜನಸಾಮಾನ್ಯರ ಬದುಕಿನಲ್ಲಿ ಪ್ರಸ್ತುತತೆಯಲ್ಲಿಯೂ ಕಾಣಬಹುದಾಗಿದೆ. ದಾಸ ಸಾಹಿತ್ಯ ಕಾಲದಲ್ಲಿ ಕನಕದಾಸರನ್ನು ಪವಾಡ ಪುರುಷರೆಂದು ಚಿತ್ರಿಸಿದ್ದಾರೆ. ಅವರು ಒಮ್ಮೆ ಉಡುಪಿಯ ಕೃಷ್ಣ ಮಂದಿರದಲ್ಲಿ ದರ್ಶನಕ್ಕೆ ಹೋದಾಗ, ಅಲ್ಲಿನ ಬ್ರಾಹ್ಮಣರು ಬ್ರಾಹ್ಮಣೇತರರರಿಗೆ ದರ್ಶನ ನಿರಾಕರಿಸಲಾಗಿ, ಮನನೊಂದ ಕನಕದಾಸರು ಭಕ್ತಿಯಿಂದ ಪ್ರಾರ್ಥಿಸುತ್ತಾ, ದೇವಾಲಯದ ಹಿಂಭಾಗಕ್ಕೆ ಬಂದಾಗ, ಅಲ್ಲಿಯೇ ದೇವಾಲಯದ ಗೋಡೆ ಕಿಂಡಿ ಬಿದ್ದು ಕನಕದಾಸರಿಗೆ ಶ್ರೀ ಕೃಷ್ಣನು ದರ್ಶನ ನೀಡಿದನೆನ್ನಲಾಗಿದೆ. ಈಗಲೂ ಆ ಕಿಂಡಿ ಬಿದ್ದ ಗೋಡೆಯನ್ನು **ಕನಕನ ಕಿಂಡಿ** ಎಂದು ಕರೆಯುತ್ತಾರೆ. ಈ ಪ್ರಕರಣ ಇತಿಹಾಸ ಪ್ರಸಿದ್ಧವಾಗಿದೆ.

ಕನಕದಾಸರು ಶ್ರೀಸಾಮಾನ್ಯರ ಶ್ರೇಷ್ಠತೆಯನ್ನು, ಸಮಾನತೆಯನ್ನು ಜಗತ್ತಿಗೆ ಸಾರಲು ಅವರು ತಮ್ಮ ಪಾಂಡಿತ್ಯ ಮತ್ತು ಪ್ರತಿಭಟನೆಯಿಂದ **ರಾಮಧ್ಯಾನಚರಿತೆ** ಎಂಬ ಖಂಡಕಾವ್ಯ ಬರೆದಿದ್ದಾರೆ. ಈ ಕಾವ್ಯವಸ್ತು ರಾಮಾಯಣದ್ದು, ಇಲ್ಲಿ ಕವಿ ತನ್ನ ಜಾಣ್ಮೆಯಿಂದ ಕಥೆಯನ್ನು ವಿಸ್ತಾರವಾಗಿ ಹೇಳದೆ, ಅದು ಓದುಗರಿಗೆ ಮನಮುಟ್ಟುವಂತೆ ಸಾರಾಂಶರೂಪದಲ್ಲಿ ಅದನ್ನು ಓಡಿಸಿಕೊಂಡು ಹೋಗುತ್ತಾರೆ. ರಾವಣ ಸಂಹಾರದ ನಂತರ ಶ್ರೀರಾಮ ಸೀತಾ ಲಕ್ಷ್ಮಣರೊಡಗೂಡಿ ಅಯೋಧ್ಯಭಿಮುಖವಾಗಿ ಪ್ರಯಾಣ ಹೊರಟಾಗ, ಮಾರ್ಗಮಧ್ಯದಲ್ಲಿ ವಾಲ್ಮೀಕಿ ಮುನಿ ಆಶ್ರಮಕ್ಕೆ ಬರುತ್ತಾನೆ. ಶ್ರೀ ರಾಮಾಗಮನದ ವಾರ್ತೆಯನ್ನು ತಿಳಿದು, ಆಸು-ಪಾಸಿನ ಕ್ಷೇತ್ರದಲ್ಲಿನ ಮುನಿಶ್ರೇಷ್ಠರೆಲ್ಲಾ ಬಂದು ಶ್ರೀ ರಾಮನ ದರ್ಶನ ಪಡೆಯುತ್ತಾರೆ. ಅವರೆಲ್ಲರಿಂದಲೂ ಶ್ರೀ ರಾಮನು ಆಶೀರ್ವಾದಿತನಾಗಿ ಸಂತಸಗೊಳ್ಳುತ್ತಾನೆ. ಆಗ ಮುನಿ ಶಿಷ್ಯರೆಲ್ಲರೂ ಬಗೆ ಬಗೆಯ ಭಕ್ಷ್ಯಾರ್ಥಗಳನ್ನು ಶ್ರೀ ರಾಮನ ಮುಂದೆ ರಾಶಿ ಮಾಡಲು, ಅದನ್ನೆಲ್ಲಾ ಶ್ರೀ ರಾಮನು ಕಂಡು ಶ್ರೀ ರಾಮನು

ವಾನರರ ಕಡೆ ನೋಡಲು ಅವರೆಲ್ಲಾ ಆ ಭಕ್ಷ್ಯಾರ್ಥಗಳನ್ನು ತಿಂದುಂಡು ಕುಣಿದಾಡಿದರು. ಆಮೇಲೆ ರಾಮನ ಎಡಭಾಗದಲ್ಲಿ ಸುಗ್ರೀವ ವಾನರ ಪರಿವಾರ, ಬಲಭಾಗದಲ್ಲಿ ವಿಭೀಷಣ ಪರಿವಾರ, ಎದುರಿನಲ್ಲಿ ಸಕಲ ಮುನಿಜರು ಮೆರೆಯುತ್ತಿತ್ತು. ಸಭೆ ಸೀತೆ-ಲಕ್ಷ್ಮಣರು ಮಧ್ಯದಲ್ಲಿರಲು, ಆಗ ಶ್ರೀ ರಾಮನು ಅನಿಲ ಸುತನನ್ನು ಕುರಿತು ಭಕ್ಷ್ಯ ಪದಾರ್ಥಗಳ ರುಚಿ ಏನು ಎನ್ನಲು, ಆಗ ಅನಿಲಸುತನು ಬಳಸಿದ ಧಾನ್ಯಗಳನ್ನು ನೋಡಲಾಗದೆ, ಹೇಳಲಾಗದು ಎಂದಾಗ, ಮನಿಶಿಷ್ಯರು ಬಳಸಿದ ನವಧಾನ್ಯಗಳನ್ನು ತಂದು ರಾಶಿಯಾಗಿ ಜೋಡಿಸಿದರು. ಶ್ರೀ ರಾಮನು ಈ ಎಲ್ಲಾ ಧಾನ್ಯಗಳನ್ನು ವೀಕ್ಷಿಸಿ, ಇವುಗಳಲ್ಲಿ ಶ್ರೇಷ್ಠವಾದುದೊಂದನ್ನೇ ಹೇಳಿರಿ ಎಂದೆನಲು ಆಗ ಮುನಿಗಳು ಒಂದೊಂದನ್ನು ಒಬ್ಬೊಬ್ಬರು ಶ್ರೇಷ್ಠವೆನಲು, ಆಗ ಒಂದನ್ನೆ ಹೇಳಿರಿ ಎಂದಾಗ ಗೌತಮ ಮುನಿಯು ಹಲವು ಭಿನ್ನ ವಿಚಾರಗಳೇಕೆ, **ದಾಶರಥಿ ಚಿತ್ತೈಸು ನಮ್ಮಯ ದೇಶಕತಿಶಯ ನರೆದಲೆಗನೇ ವಾಸಿ ಎನಲು** ಅಂದರೆ, ರಾಗಿಯೇ ಶ್ರೇಷ್ಠ ಎಂದಾಗ ಅಲ್ಲಿಯೇ ಇದ್ದ ಭತ್ತ (ವ್ರೀಹಿ) ರಾಗಿ (ನರೆದಲೆಗ)ಯ ಮೇಲೆ ವಾಗ್ದಾಳಿ ನಡೆಸುತ್ತದೆ. ಅಷ್ಟೇ ಅಲ್ಲದೆ, ಅದನ್ನು ಹೀನಾಯವಾಗಿ ಟೀಕಿಸುತ್ತದೆ. ಶೂದ್ರನ್ನ ಎಂದು ಜರಿಯುತ್ತದೆ. ಇಂತಹ ವಾಗ್ದಾಳಿಯನ್ನು ನಿರೀಕ್ಷಿಸದ ರಾಗಿ (ನರೆದಲಗ) ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ಭತ್ತದ ಮೇಲೆ ಎರಗುತ್ತದೆ. ಅಷ್ಟೇ ಅಲ್ಲ, ಬಂಡ, ಕಪಲಿ, ಕುಟಿಲಾತ್ಮ ಇತ್ಯಾದಿಯಾಗಿ ವಾಗ್ದಾಳಿ ಮಾಡುತ್ತದೆ. ಈ ವಾಗ್ದಾಳಿಯನ್ನು ಕಂಡು ಭತ್ತವು ತತ್ತರಿಸಿ ಹೋಗುತ್ತದೆ. ರಾಗಿ ಮುಂದುವರೆದು ಏನು!! ನೀವೆಲ್ಲಾ ಹಿರಿ-ಕಿರಿದೆನ್ನದೆ ಮೌನತಾಳಿದಿರಿ? ನಿಮಗೆ ಸಾಧ್ಯವೋ, ಅಸಾಧ್ಯವೋ, ಅಷ್ಟನ್ನಾದರೂ ಹೇಳಿಬಿಡಿ, ಎಂದು ಸಭಾಸದನದವರನ್ನು ಪ್ರಶ್ನಿಸುವ ನೈತಿಕ ಸ್ಥೈರ್ಯ ಪ್ರದರ್ಶಿಸುತ್ತದೆ. ಆಗ ಶ್ರೀರಾಮ ಅವರೀರ್ವರನ್ನು ಆರು ತಿಂಗಳು ಸೆರೆವಾಸ ವಿದಿಸಿ, ಅಯೋಧ್ಯೆಯ ಕಡೆಗೆ ಪ್ರಯಾಣ ಬೆಳೆಸುತ್ತಾನೆ. ಶ್ರೀ ರಾಮನು ಪಟ್ಟಾಭಿಷೇಕನಾಗಿ ಈ ಇಬ್ಬರ ನೆನಪು ಬರಲು ಒಂದು ಸಭೆಯನ್ನು ಏರ್ಪಡಿಸುತ್ತಾನೆ. ಅಲ್ಲಿಗೆ ರಾಜಮಹಾರಾಜರು, ಮುನಿಶ್ರೇಷ್ಠರು ದೇವಾನು ದೇವತೆಗಳೆಲ್ಲಾ ಜೊತೆಗೆ ಸಾಮಾಜಿಕರು ಕೂಡ ಬಂದು ಸೇರುತ್ತಾರೆ. ಈ ಸಭೆ ಸೇರುವ ಮೊದಲೇ ಶ್ರೀರಾಮ ಹನುಮಂತನನ್ನು ಕುರಿತು ವ್ರೀಹಿ, ನರೆದಲಗರನ್ನು ಕರೆತರಲು ಕಳುಹಿಸುತ್ತಾನೆ. ಸಭೆ ಸೇರುವ ವೇಳೆಗೆ ಏಳು ತಿಂಗಳಾಗಿರುತ್ತದೆ. ಈ ಬಾರಿ ಸಭೆಯಲ್ಲಿ ನರೆದಲಗನೇ ಮುಂದೆ ಬಂದು ಅಲ್ಲಿ ನೆರೆದವರಿಗೆಲ್ಲಾ ವಿನಮ್ರವಾಗಿ ಬಾಗಿ ಕೈಮುಗಿದು ಕರಗಳ ಮುಗಿದು ಧರಣೀಕಾಂತ ರಘುವರನೇ ಸುಬುದ್ಧಿಯನೆಂತು ನಮಗೆರಹುವಿರಿಯವ ಪೇಳೆಂದ ನರೆದಳೆಗ ವಿನೀತನಾಗಿ ಬೇಡಿಕೊಂಡ. ಇನ್ನೊಂದೆಡೆಯಲ್ಲಿ ನಿತ್ರಾಣನಾಗಿ ತಲೆಬಾಗಿ ವ್ರೀಹಿ ನಿಂತಿದ್ದಾನೆ. ಇದನ್ನು ಗಮನಿಸಿದ ಸಭಾಧ್ಯಕ್ಷ ಶ್ರೀ ರಾಮನು ಒಮ್ಮೆ ಸಭೆಯನ್ನೆಲ್ಲ ನೋಡಿದ ಹೀಗೆ ಹೇಳಿದ. ಆತ್ಮವಂಚನೆ ಮಾಡಲಾಗುವುದಿಲ್ಲ, ಧರ್ಮದ ಸಾರಾವನ್ನು ತಿಳಿದು ಸನ್ನೇಹಮಯವಾಗಿ ಹೇಳಿರೆಂದೆನಲು? ದೇವೇಂದ್ರನು ನಸುನಗುತ್ತಾ ನರೆದಲೆಗನೇ ಶ್ರೇಷ್ಠ ಸತ್ವಯುತನು. ವ್ರೀಹಿ ನಿಸ್ಸಾರನು ಎಂದನು. ಈ ಮಾತನ್ನು ಕೇಳಿ ಹನುಮಂತ ನಾರದನಕಡೆ ನೋಡಲು ನಾರದನು ದೇವೇಂದ್ರನ ಮಾತನ್ನು ಸಮರ್ಥಿಸಿದ.

ಆಗ ನರೆದಲೆಗನೆ ಶ್ರೇಷ್ಠ ಎಂದು ಮಾನ್ಯ ಮಾಡಲಾಯಿತು. ಜೊತೆಗೆ ರಾಮನ ಸಂಕ್ಷಿಪ್ತರೂಪ ರಾಗಿ ಎಂದು ಗೌರವಿಸಲ್ಪಟ್ಟಿತ್ತು. ಅಲ್ಲಿ ನೆರೆದ ದೇವತೆಗಳು, ರಾಜರು, ಮುಶ್ರೇಷ್ಠರು ನವನವೋನ್ವಿತ ಮಾರ್ಗದಲ್ಲಿ ಉತ್ಸಾಹದಿಂದ ಪ್ರೀತಿ, ಗೌರವಾದರಗಳಿಂದ ಕರದ ವರಗಳನ್ನು ಕೊಟ್ಟರು ಭೂಮಂಡಲದಲ್ಲಿ ಪ್ರಖ್ಯಾತನಾಗಿ ಮೆರೆಯುತ್ತ-ಪೊರೆಯುತ್ತಾ ಹೋಗೆಂದು ಸಭೆ ಹರಸಿ ಕಳುಹಿಸಿಕೊಟ್ಟಿತು.

ಈ ರಾಮಧಾನ್ಯ ಚರಿತೆಯಲ್ಲಿ ಧಾನ್ಯಗಳು ಪಾತ್ರಗಳಾಗಿವೆ. ಇದು ಸಾಮಾಜಿಕ ಅಮಸತೋಲನವನ್ನು ಕಂಡು ಮನನೊಂದ ಕನಕದಾಸರು ಶ್ರೀಸಾಮಾನ್ಯರ ಶ್ರೇಷ್ಠತೆಯನ್ನು, ಶಕ್ತಿಯನ್ನು ಕಂಡುಕೊಳ್ಳುವಲ್ಲಿ ಈ ಕಥೆ ಯಶಸ್ವಿಯಾಗಿದೆ. ಅದಕ್ಕೆ ಶ್ರೀರಾಮನ ನಾಮ ಸಂಕೇತವನ್ನು ಬಳಸಿಕೊಂಡಿದ್ದಾರೆ. ಸಾಮಾಜಿಕ ಸಮಸ್ಯೆಯನ್ನು ಪುರಾಣಗಳ ಚೌಕಟ್ಟಿನೊಳಗೆ ತಂದಿರುವುದು ಅವರ ಪ್ರತಿಭಾಪ್ರಜ್ಞೆ ಮೆಚ್ಚುವಂತದ್ದಾಗಿದೆ. ಸಾಮಾಜಿಕ ಅಸಮಾನತೆಯನ್ನು ಮೇಲು, ಶ್ರೀಮಂತ, ಬ್ರಾಹ್ಮಣ, ಜ್ಞಾನಿ, ಸ್ಪೃಷ್ಯತೆ, ಸಂಸ್ಕೃತಿ, ವ್ಯಾಸಕೂಟಗಳ ಸಂಕೇತವಾಗಿ ವ್ರೀಹಿಯನ್ನು ಪ್ರತಿನಿಧಿಮಾಡಿ ; ಕೀಳು, ಬಡವ, ಶೂದ್ರ, ಅಜ್ಞಾನಿ, ಅಸ್ಪೃಶ್ಯತೆ, ಕನ್ನಡ, ದಾಸಕೂಟರ ಸಂಕೇತವಾಗಿ ನರೆದಲೆಗನನ್ನು ಪ್ರತಿನಿಧಿ ಮಾಡಿ ಕಾವ್ಯವನ್ನು ಸೃಷ್ಟಿಸಿದ್ದಾರೆ.

ಕನಕದಾಸರ ಕಾಲದಲ್ಲಿ ಸಮಾಜದಲ್ಲಿನ ಎಲ್ಲರಿಗೂ ಶಿಕ್ಷಣವಿರಲಿಲ್ಲ. ಅದು ಪ್ರಭುತ್ವಕಾಲ, ಆದರೆ, ಅಂದಿನ ಕಾಲದಲ್ಲಿ ಮಾನವೀಯ ಗುಣಗಳನ್ನು ತುಂಬಿಕೊಂಡು ದಾರ್ಶನಿಕರು, ಸಂತರು, ತತ್ವಜ್ಞಾನಿಗಳು, ಜ್ಞಾನಿಗಳೂ ಆಗಿದ್ದರು. ಅಧ್ಯಯನದಿಂದಲೇ ಮಾತ್ರ ಜ್ಞಾನ ಲಭಿಸುವುದಿಲ್ಲ. ಅದು ಅನುಭವದಿಂದಲೂ ಕೂಡ ಬರುತ್ತದೆ. ಈ ಮಾತನ್ನು ಪುಷ್ಟೀಕರಿಸಿದವವು ಕನಕದಾಸರು ಮಾತ್ರ. ಅಂದಿನ ಜನಜೀವನದಲ್ಲಿದ್ದ ಸಾಮಾಜಿಕ ಸಮಸ್ಯೆಯಾದ ವರ್ಗಕಲಹ, ಜಾತಿ ಸಮಸ್ಯೆಗಳನ್ನು, ಮಡಿ ಮೈಲಿಗೆಗಳನ್ನು ಈ ಕೃತಿಯಲ್ಲಿ ಅವರು ಧಾನ್ಯಗಳ ಸಂಕೇತಗಳ ಮೂಲಕ ತಮಗಾದ ಅನುಭವಗಳನ್ನು ಕಾವ್ಯದಲ್ಲಿ ಸೃಷ್ಟಿಸಿದ್ದಾರೆ. ಈ ಕೃತಿಯಲ್ಲಿ ಜಾತಿ ಸಮಸ್ಯೆಯನ್ನು ಸಂಕೇತಿಸುವುದರಿಂದ ಇಂದಿಗೂ ಕೂಡ ಈ ಸಮಸ್ಯೆಯು ಎಲ್ಲಾ ಕ್ಷೇತ್ರಗಳಲ್ಲಿ ಶ್ರೀ ಸಾಮಾನ್ಯರು ತೊಂದರೆಗೆ ಮತ್ತು ಶೋಷಣೆಗೆ ಒಳಗಾಗುವುದು ಕೂಡ ಪ್ರಸ್ತುತವಾಗಿದೆ. ಅಂತಹ ಸಮಸ್ಯೆಯನ್ನು ಸುಮಾರು ಐದು ನೂರು(೫೦೦) ವರ್ಷಗಳ ಹಿಂದೆ ಅನುಭವಿಸಿದ ಅನುಭವವನ್ನು ಕೃತಿಯಲ್ಲಿ ಚಿತ್ರಿಸುವುದರ ಮೂಲಕ ಪ್ರತಿಭಟನೆಯ ಮತ್ತು ಶೋಷಕರ ವಿರುದ್ಧದಲ್ಲಿ ಬಂಡಾಯದ ಧ್ವನಿಯಾಗಿ ಕಂಡು ಬರುತ್ತಾರೆ. ಇಂದಿಗೂ ಕೂಡ ಜಾತಿಪದ್ಧತಿ ಎಷ್ಟು ಜಟಿಲವಾಗಿದೆ ಎನ್ನುವುದು ಗಮನಾರ್ಹ ಅಂಶವಾಗಿದೆ.

ಈ ಮೇಲಿನ ಅಂಶಗಳ ಗಮನಿಸಿದಾಗ ಮತ್ತು ಅವರ ಬರವ ಬಗೆಗೆ ದೀರ್ಘವಾಗಿ ಯೋಚಿಸಿದಾಗ ರಾಮಧಾನ್ಯಚರಿತೆ ಯನ್ನು ಹೆಚ್ಚಿನ ಅಧ್ಯಾಯನಕ್ಕೆ ಒಳು ಮಾಡುತ್ತೇನೆ. ಅದನ್ನು ನಾನಾ ದೃಷ್ಟಿಕೋನಗಳಿಂದ ಗಮನಿಸಿದಾಗ ನನಗೆ ತೋರುವ ಅಥವಾ ಹೊಳೆಯುವ ಅಭಿಪ್ರಾಯವನ್ನು ಕಾವ್ಯ ಹೇಳಹೊರಟು ಮಾತುಗಳಿಂದು ಸ್ಪಷ್ಟಪಡಿಸುತ್ತೇನೆ. ಅದು ಇಂದಿನ ಸಾಮಾಜಿಕ ಜೀವನಕ್ಕೆ ಮತ್ತು ಸಾಂಸ್ಕೃತಿಕ ಜೀವನಕ್ಕೆ ಎಷ್ಟು ಪ್ರಸ್ತುತತೆಯಾಗಿದೆ ಎನ್ನುವುದನ್ನು ಈ ಸಂಪ್ರಬಂಧದಲ್ಲಿ ನಾನು ನನಗೆ ತೋಚಿದಷ್ಟನ್ನು ಚರ್ಚಿಸಿ, ವಿವರಿಸಬಯಸುತ್ತೇನೆ.

---

## ಅಧ್ಯಾಯ - ಎರಡು

# ಈವರೆಗೆ ನಡೆದುಬಂದಿರುವ ಅಧ್ಯಯನಗಳ ಒಂದು ಪಕ್ಷಿನೋಟ

ಹರಿದಾಸ ಪರಂಪರೆಯಲ್ಲಿ ಬರಿ ದಾಸರಾಗದೆ, ನಾಯಕನಾಗಿ, ಕಲಿಯಾಗಿ, ಸಂತನಾಗಿ, ದಾರ್ಶನಿಕರಾಗಿ, ಕವಿಯಾಗಿ, ಅಧ್ಯಾತ್ಮಿಕ ದೃಷ್ಟಿಯಲ್ಲಿ ಭಗವಂತನ ನೈಜ ಭಕ್ತನಾಗಿ, ಜೊತೆಗೆ ಹಲವಾರು ಪವಾಡ ಸಾದೃಶ ಘಟನೆಗಳನ್ನು ಜನಮನದಲ್ಲಿ ಇಂದಿಗೂ ಉಳಿಸಿ ಹೋಗಿರುವವರು ಕನಕದಾಸರು ಮಾತ್ರ ಎಂದರೆ ಅದು ಅತಿಶಯೋಕ್ತಿಯಾಗಲಾರದು. ಅವರು ಬ್ರಾಹ್ಮಣೇತರರಾಗಿ ಹುಟ್ಟಿದ್ದು. ದಾಸರಾಗಿಯೇ ಉಳಿದರೆ, ಭಗವಂತನ ಅನನ್ಯ ಭಕ್ತರಾಗಿ, ಕವಿಯಾಗಿ, ಕಾವ್ಯಗಳನ್ನು ರಚಿಸಿ, ತುಂಬು ಜೀವನವನ್ನು ಬದುಕಿದ ಕನಕದಾಸರು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿದ್ದಾರೆ. ಕನಕದಾಸರ ಕಾವ್ಯಗಳನ್ನು ಕುರಿತು ಹಲವಾರು ಪಂಡಿತೋತ್ತಮರು, ವಿದ್ವಾಂಸರುಗಳು ಅವರ ಕಾವ್ಯಗಳನ್ನು ಕುರಿತು ಅಧ್ಯಯನ ಮಾಡಿ, ಚಿಂತಿಸಿ, ಆಲೋಚಿಸಿ. ತಮ್ಮ ತಮ್ಮ ಮನದಲ್ಲಿ ಕಾವ್ಯದ ಬಗೆಗಿನ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಅವುಗಳಲ್ಲಿ ರಾಮಧಾನ್ಯ ಚರಿತ್ರೆಯ ಬಗೆಗಿನ ಉಲ್ಲೇಖಗಳನ್ನು ಮತ್ತು ಅವರ ಅವರ ಮನದ ಚಿಂತನೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಗಮನಿಸಬಹುದಾಗಿದೆ. ಅಂದರೆ, ಮನದ ಅನಿಸಿಕೆಗಳಾಗಿಯೋ ಅಥವಾ ಕನಕಸಾದರು ಜೀವನದಲ್ಲಿ ಕಂಡು ಅನುಭವಿಸಿದ ಸ್ಥಿತಿಯನ್ನು ಕುರಿತು ಅದನ್ನು ಅರ್ಥೈಸಿದ ರೀತಿಯಾಗಿಯೋ ಕನಕದಾಸರು ರಾಮಧಾನ್ಯ ಚರಿತೆಯಲ್ಲಿ ಹೇಳಹೊರಟ ರಾಗಿ ಎಂಬ ರಾಘವ ಹೆಸರಿನ ಧಾನ್ಯದ ಶ್ರೇಷ್ಠತೆಯನ್ನೋ, ಅಂದಿನ ಸಮಾಜದಲ್ಲಿ ಬ್ರಾಹ್ಮಣ-ಬ್ರಾಹ್ಮಣೇತರರ ನಡುವೆ ಇದ್ದ ತಾರತಮ್ಯ ಭಾವನೆಯನ್ನೋ ಎಂಬುದಲ್ಲದೆ, ಕಾವ್ಯ ಹೇಳ ಹೊರಟಿರುವುದು ಸಮಾಜದಲ್ಲಿ ಎಲ್ಲಾ ಮನುಷ್ಯರು ಒಂದೇ ಎಂದು ಕಾವ್ಯದ ಕೊನೆಯ ಭಾಗದಲ್ಲಿ ಬರುವ ಪ್ರಸಂಗ ನಿಷ್ಪಾದೇವಿಯ ಮಡಿಲನ್ನು ರಾಗಿ-ಭತ್ತಗಳೆರಡು ಮೇಲು ಕೀಳೆನ್ನದೆ, ಒಂದಾಗಿಯೇ ಮಡಿಲಿನಲ್ಲಿ ಜೊತೆಯಾಗುವುದು. ಜೊತೆಗೂಡಿ ಭೂಲೋಕವನ್ನು, ಅಲ್ಲಿನ ಜನರ ಬದುಕಿಗೆ ಆಸರೆಯಾಗುವುದಕ್ಕೋಸ್ಕರ ದೇವಾನುದೇವತೆಗಳೆಲ್ಲರೂ ಇವರುಗಳನ್ನು ಆಶೀರ್ವದಿಸುವುದು ಹಾಗೂ ಇಲ್ಲಿ ಭತ್ತವನ್ನು ಕೀಳು ದೃಷ್ಟಿಯಿಂದ ಕಾರಣದ ರಾಕಿಯನ್ನು ಉನ್ನತಮಟ್ಟಕ್ಕೇರಿಸುವುದು ಒಳಗೊಂಡಂತೆ ಈ ರಾಮಧಾನ್ಯ ಚರಿತೆ ಸೃಷ್ಟಿಯಾದಾಗಿನಿಂದ ಇಂದಿನವರೆಗೆ ತನ್ನದೇಯಾದ ಶ್ರೇಷ್ಠತೆಯ ಛಾಪನ್ನು ಉಳಿಸಿಕೊಂಡು, ದಿನದಿಂದ ದಿನಕ್ಕೆ ಬೇರೆ ಬೇರೆಯಾದ ಅಭಿಪ್ರಾಯವನ್ನು ಸಾಹಿತ್ಯ ಜಗತ್ತಿಗೆ ಹರಿದು ಬರುವಂತೆ ಆಕರ್ಷಿಸಿದ ಈ ರಾಮಧಾನ್ಯ ಚರಿತೆಯ ಬಗೆಗೆ ಹಲವರ ಮನದಲ್ಲಿ ಚಿಂತಿಸಿದಾಗ ಹೊಳೆದ ಮನಸ್ಸಿನ ಅಭಿಪ್ರಾಯಗಳನ್ನು ಅವಲೋಕಿಸಲಾಗಿದೆ.

**ಪ್ರೊ। ದೇ. ಜವರೇಗೌಡರು** ಕನಕದಾಸರ ರಾಮಧಾನ್ಯ ಚರಿತೆಯನ್ನು ಕುರಿತಾದ ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. "ಇದರಲ್ಲಿ ಪೌರಾಣಿಕ ಮತ್ತು ಸಾಮಾಜಿಕ ವಸ್ತುಗಳು ರೂಪಕ ವಿಧಾನದಲ್ಲಿ ಓತಪ್ರೇತವಾಗಿ ಹೆಣೆಗೆಕೊಂಡಿವೆ. ಈ ಕಥೆಯ ಪ್ರಮುಖ ಪಾತ್ರಗಳು ಪ್ರಾಣಿಗಳಲ್ಲ; ಧಾನ್ಯಗಳು. ಇದು ಕೃತಿಯ ವೈಶಿಷ್ಟ್ಯ. ಪ್ರಾಯಶಃ ಜಗತ್ತಿನ ಯಾವ ಸಾಹಿತ್ಯದಲ್ಲಿಯೂ ಧಾನ್ಯಗಳನ್ನು ಕಾವ್ಯಪಾತ್ರಗಳ ಮಟ್ಟಕ್ಕೇ ಏರಿಸಿದ್ದಿಲ್ಲ" (ಕನಕದರ್ಶನ ಪುಟ ೯೦) ಈ ಮೇಲಿನ ಮಾತುಗಳಲ್ಲಿ ಒಂದು ವಿನೂತನ ವಿಶಿಷ್ಟತೆಯನ್ನು ಕನಕದಾಸರು ಕನ್ನಡ ಸಾಹಿತ್ಯಕ್ಕೇ ಕಾಣಿಕೆಯಾಗಿ ನೀಡಿದ್ದಾರೆ. ಯಾಕೆಂದರೆ, ಇಡೀ ವಿಶ್ವಸಾಮ್ರಾಜ್ಯದಲ್ಲಿಯೇ ಪಾತ್ರಗಳಾಗದೆ ಇರುವ ಆಹಾರ ಧಾನ್ಯಗಳನ್ನು ಪಾತ್ರರೂಪಕ್ಕೆ ತಂದಿರುವುದು ಕನಕದಾಸರ ಒಂದು ಹೊಸ ಪ್ರಯೋಗ. ಎಂದೆಂದಿಗೂ ನಿತ್ಯನೂತನವಾದದ್ದೆಂದೆ ಹೇಳಬಹುದು.

"ಉತ್ತಮ ವರ್ಗದವರ ಬೇಧನೀತಿ, ಗರ್ವ, ಪ್ರತಿಷ್ಠೆ, ದೀನ ದರಿದ್ರರ ಹಾಗೂ ಹಿಂದುಳಿದವರ ಬಗೆಗಿನ ನಿರ್ದಯೆಗಳನ್ನು ವ್ರೀಹಿಯ ಮೂಲಕ ಕವಿ ಸ್ಪಷ್ಟಪಡಿಸಿದ್ದಾರೆ. ಮೇಲ್ವರ್ಗ ಮತ್ತು ಕೆಳವರ್ಗದವರು ಎಲ್ಲ ಬೌದಗಳನ್ನು ತೊರೆದು, ಒಟ್ಟಿಗೆ ಬಾಳುವುದಾದರೆ, ಸರ್ವರಿಗೂ ಕ್ಷೇಮವೊದಗಿಸುತ್ತದೆ. ದ್ವೇಷ ಮಾತ್ಸರ್ಯಗಳು ನಂದಿ ದೇಶ ಪ್ರಗತಿ ಮುಖವಾಗುತ್ತದೆನ್ನುವುದನ್ನು ದಾಸರು ಸೂಚಿಸುತ್ತಾರೆ" (ಕನಕದರ್ಶನ ಪುಟ ೪೭) ಕನಕದಾಸರು ಕೃತಿ ರಚಿಸಿದ್ದು, ದ್ವೇಷದಿಂದ ಅಲ್ಲ, ಅದು ಮಾನವ ಜನಾಂಗಗಳ ನಡುವೆ ಸಾಮರಸ್ಯವನ್ನುಂಟು ಮಾಡುವುದೇ ಆಗಿದೆ. ಅವರು ಯಾರನ್ನು ದ್ವೇಷಿಸುವ ಅಥವಾ ವಿರೋಧಿಸುವ ಮನಸ್ಸನ್ನು ಅವರ ಯಾವ ಸಾಹಿತ್ಯ ಕೃತಿಯಲ್ಲಿಯೂ ಕಾಣಲಾರೆವು. ಅಂದರೆ, ದಾಸರಿಗೆ ಬೇಕಾಗಿರುವುದು ಮಾನವ ಜನಾಂಗದ ಉದ್ಧಾರವಷ್ಟೆ. ಕನ್ನಡದ ಆದಿಕವಿ ಪಂಪನ ಉಕ್ತಿಯಾದ ಮಾನವಜಾತಿತಾನೊಂದೇ ವಲಂ ಎನ್ನುವುದರ ಜೊತೆಗೆ ಮಾನವ ಕುಲದ ಏಳಿಗೆಗೆ ಅವರು ಗಮನಹರಿಸುವುದನ್ನು ಕಾಣಬಹುದಾಗಿದೆ. ಶೂದ್ರ ಬ್ರಾಹ್ಮಣರ ಹೊಂದಾಣಿಕೆಯಿಂದ ಮಾತ್ರ ರಾಷ್ಟ್ರೈಕ್ಯ ಹಾಗೂ ದೇಶಾಭ್ಯುದಯ ಸಾಧ್ಯವೆಂದು ಕವಿ ಪ್ರವಾದಿಯಂತೆ ನಡುದಿದ್ದಾರೆ. (ಕನಕದರ್ಶನ ಪುಟ ೪೭-೪೮) ಹಿಡಿ ಮಂದಿ ಮೇಲ್ವರ್ಗದವರಿಗೆ ಮೀಸಲಾಗಿದ್ದ ಧರ್ಮ ಸಂಸ್ಕೃತಿ ಸಂಸ್ಕೃತಗಳನ್ನು ಇಡಿ ಮಂದಿಯ ಗುಡಿಸಿಲಿನೊಳಗೆ ಪ್ರವೇಶಗೊಳಿಸಿದ ಕೀರ್ತಿ ವಚನಕಾರರಿಗೆ ಸಲ್ಲಬೇಕು. ಅವರ ನಂತರ ಮೇಲ್ವರ್ಗದವರ ಜತೆಯಲ್ಲಿಯೇ ಇದ್ದುಕೊಂಡು, ಅವರ ಕುಹಕ ಕಪಟ ಚಾತುರ್ಯ ಪ್ರತಿಷ್ಠಾಹಂಕಾರಗಳ ವಿಷಜ್ವಾಲೆಯಲ್ಲಿ ಸಿಕ್ಕಿಕೊಂಡು ನರಳಿಸುತ್ತಲೆ ಪ್ರತಿಭಟನೆಯ ಖಡ್ಗವೆತ್ತಿದವವು, ಸಂಪ್ರದಾಯದ ವಿರುದ್ಧ ಬಂಡೆದ್ದವರು ಕನಕದಾಸರು (ಕನಕದರ್ಶನ ಪುಟ ೭೮) ಕನಕದಾಸರು ದಾಸ ಪರಂಪರೆಯಲ್ಲಿದ್ದುಕೊಂಡು ಮೇಲ್ವರ್ಗವನ್ನು ಕಡೆಗಣಿಸದೆ,

ಕೆಳವರ್ಗದ ಸಮಾಜವನ್ನು ಉತ್ತಮೀಕರಣಗೊಳಿಸುವಲ್ಲಿ ಮುಂದಾಗುವುದು ಕಂಡುಬರುತ್ತದೆ. ಕನಕದಾಸರು ಜಾತಿ, ಮತೀಯ ಭಾವನೆಯಿಂದ ಅನುಭವಿಸಿದ ಅಪಮಾನ, ಅವಮಾನ, ನಿಂದನೆಗಳಿಂದ ಮುಕ್ತಿಯೆಡೆಗೆ ಅಂದರೆ, ತನ್ನ ಸಮಾಜವನ್ನು ಅವರು ಮೇಲುಸ್ಥರದ ಸಮಾಜವನ್ನಾಗಿ ಮಾಡಲು ಪ್ರಯತ್ನಿಸುತ್ತಾರೆ. ಸಮಾಜದಲ್ಲಿ ತಮಗಾದ ಯಾವ ಕಹಿ ಅನುಭವಗಳು ಇತರರ ಮೇಲಾಗಬಾರದೆಂದು ಅವರ ಕಾಲಜ್ಞಾನವಾಗಿರುತ್ತೆ. ಹಾಗಾಗಿ ಅವರು ಮೇಲ್ವರ್ಗವನ್ನು ಟೀಕಿಸದೆ, ಸಾಹಿತ್ಯ ಕೃತಿಗಳ ಮೂಲಕ ಪ್ರಶ್ನಿಸುವ, ಪ್ರತಿಭಟಿಸುವ, ಹೋರಾಟದ ಪ್ರತಿಮೆಯಾಗಿ, ರಾಮಧಾನ್ಯಚರಿತೆಯನ್ನು ಸಮಾಜದ ಒಂದು ಹಂತದಿಂದ ಅಂದರೆ, ಭತ್ತ-ರಾಗಿಯರ ವಾಗ್ವಾದಗಳಿಂದ ನಿಷ್ಠಾದೇವಿಯ ಪ್ರಸಂಗದವರೆಗೆ ಒಂದು ಕಾವ್ಯ ಕೊನೆಯಲ್ಲಿ ಬೇಧಭಾವವಿಲ್ಲದೆ, ಎರಡು ಧಾನ್ಯಗಳು ನಿಷ್ಠಾದೇವಿಯ ಮಡಿಲು ಸೇರುವುದು ಜೊತೆಯಲ್ಲಿಯೇ ಅಲ್ಲಿ ಒಟ್ಟಿಗೆ ಎನ್ನುವುದು ಎರಡು ಸಂಸ್ಕೃತಿಗಳನ್ನು ಅಥವಾ ಎರಡು ಸಮಾಜದ ಸ್ಥಿತಿಗಳನ್ನು ಒಂದಾಗಿಸುವುದೆ ವಿನಃ ಬೇಧ ಮಾಡುವುದಲ್ಲ, ಇದು ಕನಕದಾಸರಲ್ಲಿದ್ದ ಅಗೋಚರವಾದ ಕಾಲಜ್ಞಾನವಾಗಿ ಕಂಡುಬರುತ್ತದೆ. ಇಂತಹ ಅಂಶವನ್ನೊಳಗೊಂಡಿದ್ದರಿಂದಲೇ ಕನಕರನ್ನು ಮಹಾತ್ಮರೆಂದು ಕರೆಯಲಾಗಿದೆ. "ವರ್ಗ ವರ್ಣಜಾತಿಗಳ ಅವಾಂತರವನ್ನು ದರಿದ್ರ ಶೂದ್ರರ ಕಷ್ಟ ಸಂಕಷ್ಟಗಳನ್ನು ಬಯಲಿಸುವುದೇ ಈ ಕತೆಯ ಉದ್ದೇಶ. ಸಾಮಾಜಿಕ ನ್ಯಾಯವನ್ನೆತ್ತಿ ತೋರಿಸುವುದಲ್ಲದೆ, ರಾಘವ ಅಂದರೆ, ರಾಗಿಯ ವಿಜಯದ ಮೂಲಕ ಶೂದ್ರ ಶಕ್ತಿ ಒಂದಲ್ಲ ಒಂದು ದಿನ ಜಗತ್ತನ್ನಾಳುತ್ತದೆ ಎಂಬ ಪ್ರಮುಖ ಸಂದೇಶವನ್ನು ಈ ಕಾವ್ಯಧ್ವನಿಸುತ್ತದೆ" (ಕನಕದಾಸ ಪುಟ ೭೯) ಪ್ರಭುತ್ವ ಒಂದು ವಂಶದ ಜನರಿಗೆ ಸೀಮಿತವಾದ ನೆಲೆಯಲ್ಲಿತ್ತು. ಅದರ ವಿರುದ್ಧ ದಿಕ್ಕಿನಲ್ಲಿ ಕನಕದಾಸರು ಒಂದಲ್ಲ ಒಂದು ದಿನ ಜನಸಾಮಾನ್ಯರು ಕೂಡ ಪ್ರಭುಗಳಾಗುತ್ತಾರೆ. ಎನ್ನುವ ಮುನ್ಸೂಚನೆ ಕಾವ್ಯದಲ್ಲಿ ನಾಂದಿಯಾಗಿದೆ. ಅದನ್ನು ಇಂದಿನ ಪ್ರಜಾಪ್ರಭುತ್ವದಲ್ಲಿ ಕನಕದಾಸರ ಮುನ್ಸೂಚನೆಯನ್ನು ಕಾಣಬಹುದಾಗಿದೆ. ಬಸವಣ್ಣನವರಿಗೆ ಶರಣರಿಂದ ದೊರೆತ ನೆರವು ಕನಕದಾಸರಿಗೆ ದೊರೆಯಲಿಲ್ಲವೆಂಬುದು ಗಮನಿಸಬೇಕಾದ ಅಂಶ. ಹಾಗೆ ದೊರೆಯದಿರಲು ಅವರ ನಿರ್ಲಿಪ್ತದೆ, ವೈರಾಗ್ಯ, ಮನೋಧರ್ಮಗಳು ಕಾರಣವಾಗಿದ್ದಿರಬೇಕು. ಅಥವಾ ಜನಸಾಮಾನ್ಯರು ಅವರ ಮಟ್ಟಕ್ಕೇರುವುದು ಕಷ್ಟವಾಗಿರಬೇಕು. ಇದರಿಂದಾಗಿ ಕನಕದಾಸರ ಕ್ರಾಂತಿಕಾರಕ ವಿಚಾರಗಳು ತಾತ್ವಿಕ ನೆಲೆಯಲ್ಲಿಯೇ ನಿಂತುಬಿಡುತ್ತವೆ. ಪಟ್ಟಭದ್ರ ಹಿತಾಸಂಕ್ತಿಯ ಸಂಪ್ರಾದಯಸ್ಥವು ಯಾವಾಗಲೂ ಕ್ರಾಂತಿಯ ಶಕ್ತಿಗಳು, ಪ್ರಗತಿ ವಿರೋಧಿಗಳು; ಅವರಿಂದ ಆ ಎರಡು ಕ್ರಾಂತಿಗಳು ದಮನಗೊಂಡರು ಅವುಗಳ ಪ್ರಭಾವ ಗುಪ್ತಗಾಮಿನಿಯಾಗಿ ಜನ ಜೀವನದಲ್ಲಿ ಪ್ರವಹಿಸುತ್ತಿವೆಂಬ, ಅವಕಾಶವೊದಗಿಸಿದಾಗ ಅವು ಲಾವಾರಸವಾಗಿ ಚಿಮ್ಮುತ್ತವೆಂಬ ಸತ್ಯಕ್ಕೇ ಕನಕದಾಸರ ೫೦೦ನೇ ಜಯಂತೋತ್ಸವವೆ ಸಾಕ್ಷಿಯಾಗಿದೆ. (ಕನಕದರ್ಶನ ೧೩೩) ಕನಕದಾಸರು ಏಕಾಂಗಿಯಾಗಿ ಸಾಮಾಜಿಕ ಅಸಮತೋಲನವನ್ನು ಹೋಗಲಾಡಿಸಲು ಸಾಧ್ಯವಾಗಲಿಲ್ಲ. ಅವರ ಎಲ್ಲಾ ಮನದೊಳಗಿನ

ಚಿಂತನೆಳನ್ನು ಅವರ ಸಾಹಿತ್ಯ ಕೃತಿಗಳಲ್ಲಿ ಚಿತ್ರಿಸಿ, ಸೆರೆಹಿಡಿದ್ದಾರೆ. ಶರಣರು ಜಾತಿ ಮತೀಯ ಭಾವನೆ ತೊರೆದು, ಸಮೂಹವಾಗಿ ಸಾಮಾಜಿಕ ಕ್ರಾಂತಿ ಮಾಡಿದರು. ಆದರೆ ದಾಸರ ಕಾಲದಲ್ಲಿ ಅಂತಹ ಸಾಮಾಜಿಕ ಕ್ರಾಂತಿಗೆ ಜನಸಾಮಾನ್ಯರು ಕನಕದಾಸರಷ್ಟು ಪಕ್ವವಾಗಿರಲಿಲ್ಲ, ಎಂದರೆ ಕನಕದಾಸರಷ್ಟು ತಾಳ್ಮೆ, ಸಹನೆ, ಜೊತೆಗೆ ಬುದ್ಧಿಶಕ್ತಿಯ ಕೊರತೆ, ಅಂದಿನ ಜನಜೀವನದಲ್ಲಿ ಒಂದಾಗುವಿಕೆಯ ಸ್ಥಿತಿ ಕಂಡು ಬರುವುದಿಲ್ಲ. ಆದ್ದರಿಂದ ದಾಸರು ಕೇವಲ ತಮ್ಮ ಹೋರಾಟವನ್ನು ಕೃತಿಯಲ್ಲಿಗಷ್ಟೇ ಸೀಮಿತಮಾಡಿಕೊಂಡದ್ದು, ಕಂಡುಬರುತ್ತದೆ.

ಈ ಕೃತಿಯಲ್ಲಿ ಜಾತೀಯತೆಯ ಹಾಗೂ ಸಾಮಾಜಿಕ ಅಸಮಾನತೆಯ ಖಂಡನೆಯಿದೆ. ಜಾತಿಯ ಅಥವಾ ಮತೀಯ ಕಲಹವನ್ನು ಪ್ರತಿಬಿಂಬಿಸುವ ಕೃತಿಗಳು ಕನ್ನಡ ಸಾಹಪಿತ್ಯದಲ್ಲಿ ಹಿಂದೆಯೂ ಇದ್ದುದಂತೂ ನಿಜ. ಆದರೆ, ರೂಪಕದ ಮೂಲಕ ಸಾಮಾಜಿಕ ಸಮಸ್ಯೆಯ ಘೋರತನವನ್ನು ಬಯಲಿಗೆಳೆದು, ಸಮನ್ವಯ ಸಾಮರಸ್ಯವನ್ನು ಸಾಧಿಸುವಂಥ ಸಾಹಿತ್ಯಿಕ ಪ್ರಯತ್ನಗಳು ಹಿಂದೆ ಅತಿ ವಿರಳವಾಗಿದ್ದವು.

ಹರಿದಾಸ ಪರಂಪರೆಯ ಮತ್ತು ದಾಸ ಸಾಹಿತ್ಯದ ಅಶ್ವಿನೀ ದೇವತೆಗಳಲ್ಲೊಬ್ಬರೆಂದೂ, ಯುಗ ಪ್ರವರ್ತಕರೆಂದೂ, ಕ್ರಾಂತಿಕಾರಕರೆಂದೂ, ಖ್ಯಾತನಾಮರಾದ ಕನಕದಾಸರು 'ಯಾವ ಮತವನ್ನೂ ದ್ವೇಷಿಸದೆ, ಯಾವ ಮತಕ್ಕೂ ಅಂಟಿಕೊಳ್ಳದೆ, ಸರ್ವಮತಗಳನ್ನು ಏಕಪ್ರಕಾರವಾಗಿ ಗೌರವಿಸುತ್ತ, ಆತ್ಮೋದ್ಧಾರ ಸಾಧನೆಯ ಗುಂಗಿನಲ್ಲಿ ದೀನದಲಿತರ ಯೋಗಕ್ಷೇಮವನ್ನು ಮರೆಯದೆ, ಭಕ್ತಿ ಸಂಬಂಧವಾದ ಕೀರ್ತನೆಗಳ ಜೊತೆಗೆ ಶ್ರೇಷ್ಠವಾದ ಕಾವ್ಯಗಳನ್ನು ರಚಿಸುವುದರ ಮೂಲಕ ಜನಸೇವೆ ಜನಾರ್ಧನ ಸೇವೆಗಳೆರಡನ್ನು ಯಶಸ್ವಿಯಾಗಿ ಕೈಗೊಂಡ ಸಾಧಕಶ್ರೇಷ್ಠರು. ಶತಮಾನಗಳಿಂದ ಕಾಲಕಸವಾಗಿ ಹೇಯಜಂತುಗಳಂತೆ ಬಾಳುತ್ತಿರುವ ದಲಿತ ಜನರ, ಎಲ್ಲ ಯುಗಗಳ ಎಲ್ಲ ದೇಶಗಳ ನತದೃಷ್ಟ ನಿಮ್ನ ಜನಾಂಗಗಳ ಪ್ರತಿನಿಧಿಯಾಗಿ, ನರೆದಲೆಗನಾಗಿ ದಾಸರು ಖಂಡೆಯ ಖಡ್ಗವೆತ್ತಿದ್ದಾರೆ. ಇದೊಂದು ಸುಂದರವಾದ ಮತ್ತು ಕಾಂತಿಯುತವಾದ ವಿಡಂಬನ ಕಾವ್ಯ. ಬಿಂಕಗುಳಿಗಳ ಮತಾಂಧರ ಮತ್ತು ಪಟ್ಟಭದ್ರ ಹಿತಾಸಕ್ತರ ಮೂಗುಕೆತ್ತಿ, ಅವರ ಓರೆ ಕೋರೆಗಳನ್ನು ತಿದ್ದಬೇಕೆಂಬುದೇ ಕವಿಯ ಪ್ರತಿಜ್ಞೆಯಾಗಿದೆ; ಜೊತೆಗೆ ಈ ಓರೆಕೋರೆಗಳು ಸಾಮಾನ್ಯರಿಗೆ ಗ್ರಹಿಕೆಯಾಗಿ ಅವರು ಎಚ್ಚೆತ್ತುಕೊಳ್ಳಬೇಕೆಂಬುದು ಅವನ ಗ್ರಹಿಕೆಯಾಗಿದೆ.

ಕರ್ತವ್ಯಪ್ರಜ್ಞೆ, ಸತ್ಯನಿಷ್ಠ, ಲೋಕಕಾರುಣ್ಯ, ನೈತಿಕಶ್ರದ್ಧೆ, ಮೇಲಾಗಿ ಧರ್ಮ, ಕೋಪ - ಇವು ಆ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿಗಳು. ಸ್ಪೃಶ್ಯ ಮತ್ತು ಅಸ್ಪೃಶ್ಯರ ನಡುವಿನ ಹೋರಾಟವಾಗಿ ಕಾಣಬಹುದಾಗಿದೆ.

**ಡಾ। ಎಂ. ಚಿದಾನಂದಮೂರ್ತಿ**ಯವರು ಕನಕದಾಸರ ರಾಮಧಾನ್ಯ ಚರಿತ್ರೆ ಕುರಿತ ಅಭಿಪ್ರಾಯಗಳು : "ಕನಕದಾಸರ ಮೇಲ್ವರ್ಗದ ಜನ ತನ್ನನ್ನು ಒಪ್ಪಿಕೊಳ್ಳುವ ಮುನ್ನ ಅವರಿಂದ ತಿರಸ್ಕಾರ ಅವಹೇಳನಗಳನ್ನು ಅನುಭವಿಸಿದನೆಂಬಲ್ಲಿ, ಅನುಮಾನ ಕಾಣದು, ಅವನ ಜಾತಿ ಪೆಂಡಭೂತದಂತೆ ಅವರ ಜೀವನದುದ್ದಕ್ಕೂ ಕಾಡಿದ್ದರೆ, ಆಶ್ಚರ್ಯವಿಲ್ಲ. ಈ ಹಿನ್ನೆಲೆಯಲ್ಲಿ ಅವರ ರಾಮಧಾನ್ಯ ಚರಿತ್ರೆ ಕೃತಿಯ ವಸ್ತು ಬಹು ಅರ್ಥಪೂರ್ಣವಾಗಿ ತೋರುತ್ತದೆ."

**ರಾಗಿ** ಎಂಬ ಹೆಸರನ್ನು ಭಾಷಿಕವಾಗಿ ವಿವರಿಸಲು ಮತ್ತು ಅದು ಬಡಜನರ ಆಧಾರ ಎಂಬುದನ್ನು ಸ್ಥಾಪಿಸಲು ಹುಟ್ಟಿಕೊಂಡ ಪುರಾಣ ಇದು ಎಂಬಲ್ಲಿ ಅನುಮಾನವಿಲ್ಲ. ಈ ಜಾನಪದ ವಸ್ತುವನ್ನು ಕವಿ ಒಂದು ವಿಶಿಷ್ಟ ಉದ್ದೇಶಕ್ಕೇ ಬಳಸಿಕೊಂಡಿರುವ ರೀತಿ ಅನನ್ಯವಾದುದು. ಇದರೆ ಯಾವುದೇ ರಾಮಾಯಣ ಕೃತಿಗಳಲ್ಲಿ ಇಲ್ಲದ ಈ ರಾಗಿಯ ಪ್ರಸಂಗ ಕನಕದಾಸರ ಸ್ವಂತ ಸೃಷ್ಟಿ ಅಷ್ಟೆಯಲ್ಲ, ಇದು ಒಂದು ಜನಪದದಲ್ಲಿದ್ದ ಜನಪದ ಕಥೆಯನ್ನು ಬಳಸಿಕೊಂಡು ಅದೊಂದು ಪರಿಣಾಮಾತ್ಮಕ ಕಾವ್ಯ ಮಾಡುವಲ್ಲಿ ಕನಕದಾಸರ ಹಿರಿಮೆಗೆ ನಾವು ತಲೆದೂಗಲೇಬೇಕು. ಏಕೆಂದರೆ, ಈ ಜನಪದ ಕಥೆಯ ಪಾತ್ರಗಳು ಧಾನ್ಯಗಳು ಅವರಲ್ಲಿ ಹಾಗಿಗೆ ರಾಮನ ಸಂಕ್ಷಿಪ್ತನಾಮ ರಾಘವ ಪದದಿಂದ ರಾಗಿ ಬಂದಿದೆ, ರಾಗಿ ಅಂದರೆ, ಪ್ರೀತಿ ಎಂದೂ ಅರ್ಥ ಇದೆ. ಈ ರಾಗಿ ದೇವಾನುದೇವತೆಗಳೆಲ್ಲರಿಂದಲೂ ಹೊಗಳಿಸಿಕೊಳ್ಳುತ್ತದೆ. ಕನಕದಾಸನಂತೆಯೇ ಮೇಲ್ನೋಟಕ್ಕೆ ದೀನ ಧ್ವನಿಯಿಂದಾಗಿ ವೈಶಿಷ್ಟ್ಯಪೂರ್ಣವೆಂದೂ, ಹಿಂದಿನ ಕನ್ನಡದಲ್ಲಿ ಅಂತಹ ಅಸಾಧಾರಣ ವಿರಳ ಕೃತಿಗಳಲ್ಲಿ ಒಂದೆಂದು ತಿಳಿದು ಬರುತ್ತದೆ.

ಈ ಕೃತಿಯ ಮಹತ್ವವನ್ನು ಮೂರು ಹಂತಗಳಲ್ಲಿ ಗುರುತಿಸಬಹುದು.

೧. ಕನಕದಾಸರ ಆತ್ಮಚರಿತ್ರಾತ್ಮಕ ಕೃತಿಯಾಗಿ
೨. ಅಲಿಗರಿ ಕತೆಯಾಗಿ
೩. ವರ್ಗ ಹೋರಾಟವನ್ನು ಚಿತ್ರಿಸುವ ಕೃತಿಯಾಗಿ.

ಎಲ್ಲ ಧಾನ್ಯಗಳಿಗಿಂತ ರಾಗಿಯ್ನ ಶ್ರೇಷ್ಟವೆಂಬ ರಾಮನ ತೀರ್ಮಾನ, ವ್ಯಸರಾಯರು ತಮ್ಮ ಶಿಷ್ಯರಲ್ಲೆಲ್ಲಾ ಕೆಳದರ್ಜೆಯ ಕನಕದಾಸರೇ ಶ್ರೇಷ್ಠ ಎಂದು ಎತ್ತಿ ಹಿಡಿದಿದ್ದನ್ನು ಸೂಚಿಸುವಂತೆ ತೋರುತ್ತದೆ.

ಶೂದ್ರಾನ್ನವಾದ ರಾಗಿಯೊಡನೆ ಕನಕದಾಸರು ತನ್ನಂತಹ ಕುಲಹೀನರನ್ನು ಸಮೀಕರಿಸಿರುವಂತಿದೆ

ಭತ್ತ - ರಾಗಿಯನ್ನು ಕುಲಹೀನ ಶೂದ್ರಾನ್ನ ಎಂದು ಕುಚೋದ್ಯ ಮಾಡುವುದರಲ್ಲಿ ಕನಕದಾಸರ ಮೇಲುವರ್ಗದವಿಂದ ಪಡೆದ ಅನುಭವವಿದೆ.

ರಾಗಿಯ ಮೂಲಕ ಮಾತ್ರವಲ್ಲದೆ, ರಾಮನ ಬಾಯಿಯಲ್ಲಿಯೂ ಭತ್ತವನ್ನು ಅಲ್ಲಗಳೆಯಿಸುವುದರ ಮೂಲಕ ತನಗೆ ಗೊತ್ತಿಲ್ಲದೆಯೇ ಒಂದು ಬಗೆಯ ಮಾನಸಿಕ ಸಮಾಧಾನವನ್ನು ಅನುಭವಿಸಿರಬಹುದು.

ಮಾನವೀಯತೆಯ ಪ್ರತಿಪಾದನೆ ಈ ಕತೆಯ ಪ್ರಮುಖ ಉದ್ದೇಶವಾಗಿದೆ.

ಇಲ್ಲಿನ ಸಮಸ್ಯೆ ಕೆಳಜಾತಿ-ಮೇಲುಜಾತಿ ಅಥವಾ ಶೂದ್ರ - ಶೂದ್ರೇತರ ಜಾತಿಗಳ ಕಲಹಕ್ಕೆ ಸಂಬಂಧಿಸಿದ್ದು, ಮತ್ತು ಅವರ ಜೊತೆಜೊತೆಗೆ ಬಡವ-ಶ್ರೀಮಂತರ ಹೋರಾಟಕ್ಕೆ ಕೆಳವರ್ಗದವರ ಎಚ್ಚರ ಮತ್ತು ಪ್ರತಿಭಟನೆಗೂ ಸಂಬಂಧಿಸಿದ್ದೂ, ಆ ದೃಷ್ಟಿಯಿಂದ ರಾಮಧಾನ್ಯ ಚಿಂತೆಯ ಕತೆ ಸೂಕ್ಷ್ಮ ವಿಶ್ಲೇಷಣೆಗೆ ಅರ್ಹವಾದುದು.

ರಾಗಿಯ ಸಿಡಿಲ ಗರ್ಜನೆ ಎಚ್ಚೆತ್ತ ಕೆಳಜನರ ಉತ್ಸಾಹ ಕೇಕೆ ಹೊಸದಾಗಿ ದೊರೆತ ಸ್ಥಾನಮಾನಗಳ ವಿಜಯ ಘೋಷವು ಆಗಿದೆ.

**ಡಾ। ಶ್ಯಾಮಸುಂದರ ಬದರಕುಂದಿ** ಅವರು ರಾಮಧಾನ್ಯ ಚರಿತೆಯ ಕುರಿತಾದ ಅಭಿಪ್ರಾಯ : ರೂಪಕ ಕಾವ್ಯದ ಮೂಲಕ ಕನಕದಾಸರುತಮ್ಮ ಅಳಲನ್ನು ತೋಡಿಕೊಳ್ಳುತ್ತ ಅದು ಒಳಗೊಂಡ ದ್ವಂದ್ವವನ್ನು ಮತ್ತು ತಾವು ಒಂದು ಚೌಕಟ್ಟಿನಲ್ಲಿ ಕಂಡುಕೊಂಡ ಸಮಾಧಾನವನ್ನು ಒಟ್ಟಿಗೇ ಹಿಡಿದಿಟ್ಟಿದ್ದಾರೆ.

**ಪ್ರೊ। ಹಿ.ಶಿ. ರಾಮಚಂದ್ರೇಗೌಡರು** ಕನಕದಾಸರ ರಾಮಧಾನ್ಯ ಚರಿತೆಯ ಬಗೆಗೆಚಿಂತನೆಗಳು ಕನಕದಾಸರು ಕಾವ್ಯ ಮಾತ್ರವೆ, ದಾಸರು ಮಾತ್ರವೆ, ತಿಮ್ಮಪ್ಪ ಮಾತ್ರವೆ, ಆಗದಿರುವ ಕಾರಣಕ್ಕೆ ಅವರ ಬಗ್ಗೆ ಪುನಃ ಪುನಃ ಆಲೋಚಿಸಬೇಕಾಗುತ್ತದೆ. ಇದು ಕನಕದಾಸರ ಪುನರ್ ಚಿಂತನೆ. ಎಂದರೆ ಅವರು ಅದಕ್ಕೆ ಬಹಳ ಮಟ್ಟಿಗೆ ವಸ್ತುವಾಗಿದ್ದಾರೆ ಎಂಬುದೆ ಆಗಿದೆ. ಭಾರತೀಯರ ಸಾಮಾಜಿಕ ಸಂದರ್ಭದಲ್ಲಿ ಹೀಗೆ ಕನಕದಾಸರು ಪುನರ್ ಚಿಂತನೆಗೆ ಕಾರಣರಾಗುತ್ತಾರೆ ಎಂದರೆ ಅವರಲ್ಲಿ ಬೆಳೆಯುತ್ತಿರುವ ಘರ್ಷಣೆಗಳಿವೆ ಎಂದು ಅರ್ಥ. ಈ ಪರಿಸ್ಥಿತಿಯ ಮೇಲೆ ಕನಕದಾಸರು ಎರಡು ಸ್ಥಿತಿಯಲ್ಲಿ ನಮಗೆ ಗೋಚರಿಸುವರು.

೧. ಕನಕದಾಸರೆಂಬ ಅವರ ಚಾರಿತ್ರಿಕ-ಸಾಮಾಜಿಕ ಲೋಕೋಕ್ತಿ. ಇದು ಕನಕದಾಸರ ಜೀವನ ಮತ್ತು ಕಾವ್ಯಕ್ಕೆ ಸಂಬಂಧಿಸಿದ ಮಿಥ್ ಮತ್ತು ರಿಯಾಲಿಟಿಗೆ ಸೇರಿದ್ದು.

೨. ಕನಕದಾಸರ ಸಾಂಸ್ಕೃತಿಕ ಧಾರ್ಮಿಕ ಅವಸ್ಥಾಂತರ, ಇದು ಅವರೇ ಒಡ್ಡಿಕೊಂಡ ಅವರ ಸಂಸ್ಕೃತಿಕರಣಕ್ಕೆ ಸಂಬಂಧಿಸಿದ ಪ್ರಕ್ರಿಯೆಗೆ ಸೇರಿದ್ದು. ಈ ಎರಡರ ಮಧ್ಯೆಯ ಪ್ರತಿಭಟನೆಯ ಮತ್ತು ಸ್ವೀಕರಣ ಸ್ಥಿತಿಯೆ ನಮಗಿಂದು ದೊರೆಯುತ್ತಿರುವ ಕನಕದಾಸರು ಅಥವಾ ಅವರ ಕಾವ್ಯಗಳ ರೂಪದ ಅಭಿವ್ಯಕ್ತಿ.

ತಾವೇ ಬಂದು ಜನಪದ ಹಾಗೂ ತಮ್ಮದೇ ಒಂದು ಜನಪದವನ್ನು ಅವರು ಸೃಷ್ಟಿಸಿಕೊಂಡದ್ದು ಹೀಗೆ ಹುಟ್ಟಿನಲ್ಲಿ ದಾಸನಾಗುವ, ಬದುಕಿನಲ್ಲಿ ದಾಸನಾಗುವ ಮತ್ತು ಕೆಟ್ಟಲ್ಲಿ ದಾಸನಾಗುವ ಒಂದು ಶ್ರದ್ಧಾಪೂರ್ವಕ ಬಂಡಾಯದಲ್ಲಿ ಅವರು ಬೆಳೆದರು.

ಕನಕದಾಸರು ಮೊದಲಿಗೆ ಬಂಡಾಯ ಧ್ವನಿ ಆದದ್ದು, ಸಾಮಂತತೆಯಿಂದ ಸಾರ್ವತ್ರಿಕತೆಗೆ ಬಂದಾಗ ಅಂದರೆ ಅವರ ಸಾಮಂತಿಕೆಯ ಅಹಂಕಾರ ಮುರಿದಿದ್ದು, ಸಂಪತ್ತಿನ ಹಂಚಿಕೆಮಾಡಿದ್ದು, ಅಲ್ಲಿಂದ ತಾವೇ ಭಾವಿಸಿಕೊಂಡಂತೆ ತನ್ನ ಸಾಮಂತಿಕೆಯ ಅಹಂಕಾರಕ್ಕೆ ಪ್ರತಿಭಟನೆಯಾದಾಗ, ಸಾಮಂತಿಕೆ ಸೋತಾಗ ಅದರ ನಂತರ ಬದುಕಲು ಸಾಧ್ಯವಿಲ್ಲವೆನಿಸಿದಾಗ, ತಕ್ಷಣ ಬದುಕಿನ ಪರಿಹಾರ ಇಲ್ಲದಾಗ, ಇದು ಪ್ರಜ್ಞಾಸ್ಥಿತಿಯಲ್ಲಿ ನಡೆದ ಪ್ರತಿಭಟನೆ. ಬಂಡಾಯವೆನ್ನುವುದು ಒಂದು ಪರಂಪರೆಯೊಳಗಿನ ಪ್ರತಿಭಟನೆಯ ಸ್ವರೂಪದಿಂದ ; ಆ ಸ್ವರೂಪದ ಅವಕಾಶ, ಬೇಡಿಕೆ ಮತ್ತು ನಿರೀಕ್ಷೆಯಿಂದ ಆರಂಭವಾಗದೆ, ಆಗ ಮಾತ್ರ ನಾವು ಕನಕದಾಸರೇ ಆದಿಯಾಗಿ ಯಾರನ್ನಾದರೂ ಸಮಸ್ಥಿತಿಯಲ್ಲಿ ಪರೀಕ್ಷಿಸಲು ಸಾಧ್ಯವಾಗುತ್ತದೆ. ಗತಿಶೀಲತೆಯನ್ನು ಕಳೆದುಕೊಂಡ ಮತ್ತು ಚಲನಶೀಲ ಸಮಾಜವೊಂದರ ನಿರೀಕ್ಷಣೆಯ ಮಧ್ಯೆ ತಾತ್ಕಾಲಿಕವಾಗೋ, ಬಹಳ ಕಾಲದವರೆಗೂ ಹುಟ್ಟಿದ ಒಂದು ನಡತೆ. ವಿಶಿಷ್ಟಾರ್ಥದಲ್ಲಿ ವಚನ ಚಳುವಳಿ, ಸರಳಾರ್ಥದಲ್ಲಿ ದಾಸಪಂಥ ಬಂಡಾಯ ಪ್ರವೃತ್ತಿಗಳು, ವಚನ ಚಳುವಳಿ ದೈವತ್ವದ ಪ್ರೌಢಿಮೆ ಮತ್ತು ಸಮಗ್ರೀಕರಣಕ್ಕೆ ಸಂಬಂಧಿಸಿದ್ದರೆ, ದಾಸಪಂಥ ದೈವತ್ವದ ಸರಳೀಕರಣ ಮತ್ತು ಪಂಥ ಸ್ವಭಾವಕ್ಕೆ ಸೀಮಿತವಾಗಿದೆ. ದಾಸಪಂಥ ಸರಳ ಸಂಸ್ಕೃತೀಕರಣ ಪ್ರಕ್ರಿಯೆಗಳಲ್ಲಿ ಒಂದು. ಕನಕದಾಸರ ಪ್ರತಿಭಟನೆ - ಬಂಡಾಯವನ್ನು ಈ ಪರಿವೇಶದ ಒಳಗೆ ನೋಡಬೇಕಾಗುತ್ತದೆ. ತನ್ನೊಳಗೆ ಮತ್ತು ಇತರ ಮೇಲುಜಾತಿಯ ಶಿಷ್ಯರೊಳಗೆ ಕನಕದಾಸರು ಹೇಗೆ ಉನ್ನತವಾದರು, ಅದಕ್ಕಾಗಿ ಅವರು ಹೇಗೆ ಘರ್ಷಿಸಿದರು ಎಂಬುದೆ ಕನಕದಾಸರ ಬಂಡಾಯ ಪ್ರವೃತ್ತಿಯ ಮಾಧರಿಯಾಗಿದೆ. ಒಬ್ಬ ವ್ಯಕ್ತಿ ಅಥವಾ ಒಂದು ಕೃತಿ ಅಖಂಡತೆಯಲ್ಲಿ ಸಂಭವಿಸಿದ್ದಾಗಿರಬೇಕು, ಈ ದೃಷ್ಟಿಯಿಂದ ನೋಡಿದಾಗ ಕನಕದಾಸರ ಹುಟ್ಟು-ಬದುಕೇ ಒಂದು ಬಂಡಾಯ ಮನೋಧರ್ಮವೆನ್ನುವುದನ್ನು ಕಾಣಬಹುದಾಗಿದೆ. ಅವರ ಸಾಹಿತ್ಯದಲ್ಲಿ ಅದುವೇ ಕಾವ್ಯದ್ದಲ್ಲಿ ಬಂಡಾಯ ಯಾವ ಸ್ವರೂಪದ್ದು ಎಂಬುದಕ್ಕೆ 'ರಾಮಧಾನ್ಯ ಚರಿತೆ'ಯನ್ನು ಅವರ ದಾಸತ್ವ ಉನ್ನತಿಯ

ಸಂದರ್ಭದಲ್ಲಿ ಕೀರ್ತನೆಗಳಲ್ಲಿ ಹೇಗೆ ಬಂಡಾಯ ವ್ಯಕ್ತವಾಗಿದೆ ಎಂಬುದನ್ನಷ್ಟೆ ಇಲ್ಲಿ ಪರೀಕ್ಷಿಸಬೇಕಾಗಿದೆ. ಕನಕದಾಸರ ಕಾವ್ಯ 'ರಾಮಧಾನ್ಯ ಚರಿತೆ' ರಾಮ ಮತ್ತು ರಾಮತ್ವವನ್ನು ಪಡೆಯುವ ರಾಗಿಯ ಪುರಾಣ ಅಥವಾ ಚರಿತ್ರೆ. ರಾಮ ಪ್ರಕ್ರಿಯೆ ನಾನಾ ಹಂತಗಳಲ್ಲಿ ಬೆಳೆಯುವುದರ ರೂಪಕವಾಗಿ ವ್ಯಕ್ತಿತ್ವ ಧರಿಸಿದೆ. ಕಥೆಯ ಬಹಳ ಭಾಗ ರಾಮನದೇಯಾದರೂ ಅದು ರಾಗಿಯ ರಾಮ ದೀಕ್ಷೆಗಾಗಿಯೇ ಹೆಣೆಯಲ್ಪಟ್ಟದ್ದು. ರಾಮ-ರಾಗಿ-ಕನಕದಾಸರು ಈ ಕೃತಿಯ ಅಖಂಡತೆಯೊಳಗೆ ಬೇರು ಬಿಟ್ಟು ಬೆಳೆದಿದ್ದಾರೆ. ರಾಗಿ ಮತ್ತು ಕನಕದಾಸರು ರಾಮನಲ್ಲಿ ತಮ್ಮನ್ನು ಕಂಡುಕೊಳ್ಳುವ ಕೃತಾರ್ಥತೆಗಾಗಿ ಕಾಯುತ್ತಿದ್ದಾರೆ. ಇದು ಒಟ್ಟಿಗೆ ರಾಗಿ ಮತ್ತು ಕನಕದಾಸರ ತಪಸ್ಸು ಅಥವಾ ಉನ್ನತ ಸಂಸ್ಕೃತಿಗೆ ಸಮಾನರಾಗಿ ಸ್ಪಂದಿಸುವ, ಬದುಕುವ ಹಠದ ಪ್ರತಿಭಟನೆ.

ಭತ್ತ ರಾಗಿಗಳ ಜಗಳದ ಕತೆಯಲ್ಲಿ ಆಧುನಿಕ ಕಾಲದ ಸಂಗತಿಗಳನ್ನು ಆರೋಪಿಸಿ, ವಾಸ್ತವವಾಗಿ ಇಲ್ಲದ್ದನ್ನು ಹುಡುಕುವ ಪ್ರಯತ್ನವನ್ನು ನಾನು ಇಲ್ಲಿ ಮಾಡಿಲ್ಲ, ನನ್ನ ಮೇಲಿನ ವ್ಯಾಖ್ಯಾನಕ್ಕೆ ಕೃತಿಯಲ್ಲಿಯೇ ಸ್ಪಷ್ಟ ಸೂಚನೆಗಳಿವೆ.

ರಾಗಿಯ ವಿಜಯ ಜನಸಾಮಾನ್ಯರ ವಿಜಯವೂ ಹೌದು. ಹೀಗಾಗಿ ರಾಮಧಾನ್ಯಚರಿತೆ. ಕನಕದಾಸರ ಪೂರ್ಣಾಭಿವ್ಯಕ್ತಿಯೆ ಕೃತಿಯಾಗಿದೆ.

ಈ ಮೂಲಕ ರಾಗಿಯಾಗಿ ಕನಕದಾಸರು ರಾಘವತ್ವವನ್ನು ಪಡೆದು, ಸಮಾನ ಮಾನ್ಯ ಆಗುತ್ತಿದ್ದಾರೆ. ಈ ಅರ್ಥದಲ್ಲಿ ರಾಮಧಾನ್ಯ ಚರಿತ್ರೆ ಮಾನ್ಯತೆ, ಸಮಾನತೆಗಾಗಿ ಸೃಷ್ಟಿಗೊಂಡ ಬಂಡಾಯ ಕೃತಿ ಎಂದೂ ಇದು ಕನಕದಾಸರ ಬಂಡಾಯದ ರೀತಿ ಎಂದೂ ಹೇಳಬಹುದಾಗಿದೆ.

**ಪ್ರೊ। ಸುಧಾಕರ** ಅವರು ಕನಕದಾಸರ ರಾಮಧಾನ್ಯ ಚರಿತೆಯ ಬಗೆಗೆ ಅವರ ಚಿಂತನೆಗಳು - ಸತ್ಯ ಮತ್ತು ಸತ್ವರಹಿತವಾದ ವ್ಯಕ್ತಿ ಕೇವಲ ಜಾತಿಋಣದಿಂದಲೇ ಶ್ರೇಷ್ಠ ಎನಿಸಿಕೊಳ್ಳಲು ಸಾಧ್ಯವಿಲ್ಲ. ಸತ್ಯ ಮತ್ತು ಸತ್ವಸಹಿತವಾದ ನೀತಿಗುಣದಿಂದ ಮಾತ್ರ ವ್ಯಕ್ತಿ ಶ್ರೇಷ್ಠನೆನಿಸಿಕೊಳ್ಳಲು ಸಾಧ್ಯ ಎಂದು ಸಾರ್ವತ್ರಿಕ ಸತ್ಯವನ್ನು ಈ ಕೃತಿಯಲ್ಲಿ ಕಂಡರಿಸಿರುವುದರಿಂದ ಇದು ಎಲ್ಲಾ ಕಾಲಕ್ಕೂ ಎಲ್ಲರ ಮನಸ್ಸನ್ನು ಸೆರೆಹಿಡಿಯುತ್ತದೆ. ಇದರ ಜೊತೆಗೆ ಸುಪ್ರತಿಷ್ಠಿತ ವರ್ಗ ಜಾತಿಗಳ ದಮನಪ್ರವೃತ್ತಿ, ಅಪ್ರತಿಷ್ಠಿತ ವರ್ಗ ಜಾತಿಗಳ ಜಾಗೃತಿ, ಪ್ರತಿಭಟನೆ ಮತ್ತು ಆ ಮೂಲಕ ಪಡೆದ ಜಯ - ಇವುಗಳಿಂದ ವರ್ಗ ಹೋರಾಟವನ್ನು ಗರ್ಭೀಕರಿಸಿಕೊಂಡ ಮೊಟ್ಟಮೊದಲ ದಲಿತ ಬಂಡಾಯ ಕೃತಿ ಎಂಬ ದೃಷ್ಟಿಯಿಂದ ಎಲ್ಲರ ಗಮನವನ್ನು ಸೆಳೆಯುತ್ತದೆ.

**ಡಾ। ಹೆಚ್.ಜೆ.ಲಕ್ಕಪ್ಪಗೌಡರ** ಮಾತುಗಳಲ್ಲಿ ಕನಕದಾಸರ ರಾಮಧಾನ್ಯ ಚರಿತೆಯ ಬಗೆಗಿನ ಚಿಂತನೆಗಳು - ಈ ಕ್ಷೇತ್ರದಲ್ಲಿ ಕೃಷಿ ಮಾಡಿದವರು ಬಹುಮಟ್ಟಿಗೆ ಸಂಪ್ರಾದಾಯಶೀಲರಾದ ಪರಂಪರೆಯನ್ನು ಪ್ರಶ್ನಿಸದೆ, ಒಪ್ಪಿಕೊಂಡ ನೋವು-ಕಾವುಗಳಿಂದ ಸ್ಪಂದಿಸದ ಬಂಡಾಯ ದೃಷ್ಟಿಯಿಲ್ಲದ ಮೇಲು ವರ್ಗದ ಜನ. ಇದಕ್ಕೆ ಒಂದೇ ಅಪವಾದ ಕನಕದಾಸರು.

**ಶ್ರೀ ಜ್ಯೋತಿ ಹೊಸೂರ** ಅವರ ಮಾತಿನಲ್ಲಿ 'ವರ್ಗ ಸಂಘರ್ಷವನ್ನು ಪ್ರತಿಪಾದಿಸುವ ವಿಷಯವನ್ನು ಆಯ್ದುಕೊಂಡು ಕಾವ್ಯ ರಚಿಸಿದ ಇನ್ನೊಬ್ಬ ಕವಿ ಹಳಗನ್ನಡ ಕಾಲದಲ್ಲಿಯೂ ನಮಗೆ ಸಿಗುವುದಿಲ್ಲ'.

**ಕಾ.ತ. ಚಿಕ್ಕಣ್ಣ** ಅವರ ಮಾತಿನಲ್ಲಿ ಈ ಸಮಾಜಕ್ಕಾಗಿ ಸಮಾಜ ನಿರ್ಮಿತ ಅಸಮಾನತೆಗಳ ನಿರ್ಮೂಲನಕ್ಕಾಗಿ ಮಾನವಧರ್ಮದ ಶ್ರೇಷ್ಠತೆಗಾಗಿ ಸಹಜವಾಗಿ ಸ್ಪಂದಿಸಿದ ಕೀರ್ತನಕಾರ ಕವಿ ಕನಕದಾಸರು.

**ಡಾ। ಹಾ.ಮ. ನಾಯಕರ** ಮೆಚ್ಚು ಮಾತುಗಳಲ್ಲಿ 'ಶಕ್ತಿ ಸಂಪನ್ನವಾದ ವ್ಯಕ್ತಿತ್ವ ಸಂಪ್ರದಾಯವನ್ನು ಮೀರಿ ಬೆಳೆಯುತ್ತದೆಂಬುದಕ್ಕೆ ಕನಕದಾಸರು ಉಜ್ವಲ ಉದಾಹಣೆ'.

**ಬಸವರಾಜ ನಾಯ್ಕರರ** ಅಭಿಪ್ರಾಯದಲ್ಲಿ 'ಸಮಾಜವನ್ನು ಮೇಲುಜಾತಿ ಮತ್ತು ಕೀಳುಜಾತಿಗಳಲ್ಲಿ ವಿಭಜಿಸುವುದರಲ್ಲಿ ಕನಕದಾಸರು ತೋರಿದ ಸಾತ್ವಿಕ ಕೋಪವನ್ನೇ, ಭತ್ತದ ಮೇಲೆ ರಾಗಿಯು ಸಾಧಿಸಿದ ವಿಜಯವನ್ನು ಕಾಣಬಹುದು. ಕಾವ್ಯದಲ್ಲಿ ಪ್ರಜಾಪ್ರಭುತ್ವದ ಮೂಲಾದರ್ಶಗಳನ್ನು ಕಾಣಬಹುದು. ಕನಕದಾಸರ ಸೃಜನಾತ್ಮಕ ಶೋಧನೆ - ಆಳವಾದ ಸಾಮಾಜಿಕ ಕಳಕಳಿ ಮತ್ತು ಧೈರ್ಯದ ಪ್ರಯೋಗಶೀಲತೆಗೆ ಹಿಡಿದ ಕನ್ನಡಿಯಾಗಿದೆ'.

**ಕೆ.ಬಿ. ತಳಗೇರಿ** ಯವರ ಮಾತುಗಳಲ್ಲಿ - 'ಕವಿ ಸಾಮಾಜಿಕ ಚಿಂತಕನಾಗಿ, ಅಷ್ಟೇ ಅಲ್ಲ, ಭಕ್ತನಾಗಿ, ಅವನ ರಾಮಭಕ್ತಿ ಇಲ್ಲಿ ವ್ಯಕ್ತಿವಾಗಿರುವುದರಿಂದ ಕನಕದಾಸರ ಪೂರ್ಣ ಅಭಿವ್ಯಕ್ತಿಯ ಕೃತಿ ರಾಮಧಾನ್ಯ ಚರಿತೆಯಾಗಿದೆ'.

**ಡಾ। ಸಾ.ಶಿ. ಮರುಳಯ್ಯ** ರವರ ಮಾತುಗಳಲ್ಲಿ - ವ್ಯಾಸರಾಯರ ಮಠದಲ್ಲಿ ಸಂಸ್ಕೃತವನ್ನಾಡುತ್ತಿದ್ದ ಮಡಿವಂತ ವರ್ಗ ಒಂದು ; ಅದು ವ್ಯಾಸಕೂಟ; ಕನ್ನಡವನ್ನಾಡುತ್ತಿದ್ದ ಸಾಮಾನ್ಯವರ್ಗ ಮತ್ತೊಂದು; ಅದು ದಾಸಕೂಟ. ಕನಕ-ಪುರಂದರರು ದಾಸಕೂಟಕ್ಕೆ

ಸೇರಿದವರು. ಅವರನ್ನು ಸಂಸ್ಕೃತವನ್ನಾಡುತ್ತಿದ್ದ ಮಡಿಜನ ಅಸ್ಪೃಶ್ಯರನ್ನು ಕಂಡಂತೆ ಕಾಣುತ್ತಿದ್ದರು. ಈ ಕಾಲಕ್ಕಾಗಲೇ ಸಂಸ್ಕೃತ ಮೃತಭಾಷೆಯಾಗಿತ್ತು. ಕನ್ನಡ ಜನಸಾಮಾನ್ಯರ ಜೀವಂತ ಭಾಷೆಯಾಗಿತ್ತು. ಮೃತ ಭಾಷೆಯೇ ಶ್ರೇಷ್ಠವೆಂದು ಘೋಷಿಸಿದ ವ್ಯಾಸಕೂಟದವರಿಗೂ, ಜೀವಂತ ಭಾಷೆಯೇ ಶ್ರೇಷ್ಠವೆಂದು ಸಾರಿದ ದಾಸಕೂಟದವರಿಗೂ ಆದ ವಾಗ್ವಾದದಲ್ಲಿ ಸಾಮಾನ್ಯರ ಜಯವಾಗಿದೆ.

**ಸಾ.ಕೃ. ರಾಮಚಂದ್ರರಾವ್** ಅವರ ಅಭಿಪ್ರಾಯದಲ್ಲಿ ಅಕ್ಕಿಯನ್ನು ಅವರು ವ್ರೀಹಿಗನೆಂದೇ ಕರೆದಿರುವುದನ್ನು ಗಮನಿಸಬೇಕು. ಸಂಸ್ಕೃತದಲ್ಲಿ ವ್ರೀಹಿ ಎಂದರೆ ಯಜ್ಞಯಾಗಾದಿಗಳಿಗೆ ಉಪಯುಕ್ತವಾಗುವ ಧಾನ್ಯ. ವಿಶೇಷ ಶುಭ ಕಾರ್ಯಗಳಲ್ಲಿ ಬರುತ್ತದೆ. ಹೆಣದ ಬಾಯಿಗೆ ತುತ್ತು ಆಗುತ್ತದೆ ಎಂದು ಕನಕದಾಸರ ವರ್ಣನೆಯೇ ಇದೆ. ಇದು ಕರ್ಮನಿಷ್ಠೆಯನ್ನು, ಪಾಂಡಿತ್ಯವನ್ನು, ಮಂಡಿವಂತಿಕೆಯನ್ನು ಸಂಕೇತಿಸುವ ಮಾತು. ರಾಗಿಯಾದರೂ ಬಲ್ಲಿದರು, ಬಡವರುಗಳೆನ್ನದೆ ಎಲ್ಲರನ್ನೂ ರಕ್ಷಿಸುವ ಜನಸಾಮಾನ್ಯರ ಧ್ಯಾನ ಎಂದರೆ ವ್ಯವಹಾರಕ್ಕೆ ಬೇಕಾದ ಆಚಾರ ಶುದ್ಧಿ.

**ಸಿ.ಬಿ. ಹೊನ್ನಯ್ಯ** ರವರ ಮಾತಿನಲ್ಲಿ - ಇಲ್ಲಿ ರಾಗಿ ಭತ್ತಗಳನ್ನು ಒಂದೊಂದು ವ್ಯವಸ್ಥೆಯ ರೂಪಕಗಳಾಗಿ ಮಾಡಿಕೊಂಡು ಶ್ರೇಣೀಕೃತ ವ್ಯವಸ್ಥೆಯ ಸಂಪ್ರದಾಯ, ಆಚಾರ-ವಿಚಾರ-ಕಂದಾಚಾರ ಮೌಢ್ಯತೆಗಳನ್ನು ಮೊನಚಾದ ವ್ಯಂಗ್ಯ-ವಿಡಂಬನೆ-ಅಣಕಗಳ ಮೂಲಕ ಕಾವ್ಯರೂಪದಲ್ಲಿ ವ್ಯವಸ್ಥಿತವಾಗಿ ಖಂಡಿಸಿದ ಪ್ರತಿಭಟನಾತ್ಮಕ ಕಾವ್ಯ. ಈ ಕಾವ್ಯ ಕನಕದಾಸರ ಶೂದ್ರಪ್ರಜ್ಞೆಗೆ ಸಾಕ್ಷಿಯಾಗಿದೆ. ಅಲ್ಲದೆ ಈ ಕೃತಿ ಕೆಳವರ್ಗ ಜಾತಿಗಳ ಸಾಮಾಜಿಕ ಪ್ರತಿಭಟನೆಯ ಅದ್ಭುತ ನಿರೂಪಣೆಯ ಕೃತಿಯಾಗಿದೆ.

**ಪ್ರೊ। ಎಸ್.ಜಿ. ಸಿದ್ಧರಾಮಯ್ಯ** ರವರ ಚಿಂತನೆಗಳಲ್ಲಿ 'ಕಣ್ಣು ಕಿವಿ ನೆನಪುಗಳನ್ನುಳ್ಳ ಯಾವುದೇ ಚೇತನವೊಂದು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಆಶಿಸುವ ವಿವೇಕಪೂರ್ಣ ನಡೆ ಇದು. ಕಲೆಯ ಅಂತಿಮ ಆಶಯವೂ ಈ ವಿವೇಕಪೂರ್ಣ ಸಮಾನತೆಯ ಪ್ರತಿಪಾದನೆಯೇ ಆಗಿದೆ'.

ಪುರಾಣೀಕರಣ ಹಾಗೂ ಪ್ರಮಾಣೀಕರಣ ವಿಧಾನ. ಪುರಾಣದಲ್ಲಿ ಎಲ್ಲೂ ಇಲ್ಲದ ಈ ಕಲ್ಪಿತ ಪ್ರಸಂಗ, ರಾಮನ ವನವಾಸ ಜೀವನದ ಕಷ್ಟಕಾರ್ಪಣ್ಯಗಳ ವಿವರ ವರ್ಣನೆಗೆ ತೊಡಗದೇ ಆಡಳಿತ ಹೊಣೆಯರಿತ ರಾಮನ ಚಿತ್ರ ನೀಡುತ್ತದೆ. ನ್ಯಾಯದೃಷ್ಟಿ ಅವಮಾನಿತ ವರ್ಗದ ಕಡೆಗೆ ಪರೀಕ್ಷಿಸಿ, ಪ್ರಮಾಣಿಸಿ, ದೃಢೀಕರಿಸಿ, ನೀಡುವ ನ್ಯಾಯ ತೀರ್ಮಾನವಿದು. ಈ ರೂಪಕ ಪಾತ್ರಗಳು ನಡೆಸುವ ತಾರ್ಕಿಕ ಚಲನೆಯ ಅನುಭವಗತಿಯ ಜೊತೆಗೆ ನಮ್ಮ ಸಮಕಾಲೀನ ಅನುಭವ ವಿವೇಕ ಸಂವಾದಿಸತೊಡಗುತ್ತದೆ. ಸಂದರ್ಭವಶದ ಅನುಭವಮಾತ್ರವನ್ನು ಕಾಲಾತೀತವೂ, ದೇಶಾತೀತವೂ ಆದ ನೆಲೆಯಲ್ಲಿ ಒಡ್ಡಿಕೊಳ್ಳಲು ರೂಪಕವನ್ನು ಆಶ್ರಯಿಸುತ್ತದೆ. ವಿವೇಕ ರಾಮಧ್ಯಾನ ಚರಿತೆಯ ರೂಪಕ ವಿವೇಕದ ಅದ್ಭುತ ಮಾಟವಾಗಿದೆ.

—

ಅಧ್ಯಾಯ - ೩

# ಕನಕದಾಸರ ಕಾವ್ಯಗಳ ಪೌರಾಣಿಕ ವಸ್ತುವಿನಲ್ಲಿ ಕಾಣುವ ಮಾನವೀಯ ನೆಲೆಗಳು

ಕನಕದಾಸರ ಎಲ್ಲ ಸಾಹಿತ್ಯವನ್ನು ಗಮನಿಸಿದಾಗ ತಿಳಿದುಬರುವುದೇನೆಂದರೆ, ಎಲ್ಲಾ ಕೃತಿಗಳಲ್ಲೂ ಪೌರಾಣಿಕ ವಸ್ತುವಿಷಯದಿಂದ ತುಂಬಿಕೊಂಡಿರುವುದು ೧೫-೧೬ನೇ ಶತಮಾನದ ಸಾಮಾಜಿಕ - ಸಾಂಸ್ಕೃತಿಕ ಜನಜೀವನವನ್ನು ಅಂದು ಅವರು ಅನುಭವಿಸಿದ ಅನುಭವಗಳನ್ನು ಪುರಾಣದ ಅಂಶಗಳ ಮೂಲಕವೇ ತಮ್ಮ ಸಾಹಿತ್ಯದಲ್ಲಿ ದಾಖಲಿಸುತ್ತಾರೆ.

೧. **ಮೋಹನ ತರಂಗಿಣಿ** - ಇದು ಒಂದು ಶೃಂಗಾರ ಸಾಂಗತ್ಯ ಕೃತಿ. ಇದರಲ್ಲಿ ಶ್ರೀ ಕೃಷ್ಣನ ಚರಿತ್ರೆಯ ಕಾವ್ಯ ವಸ್ತು. ಕನಕದಾಸರು ವಿಜಯ ನಗರ ಅರಸ ಶ್ರೀಕೃಷ್ಣ ದೇವರಾಯನ ಆಳ್ವಿಕೆಯನ್ನು ಕಂಡಿದ್ದಿರಬೇಕು. ಅಂದಿನ ದಿನಗಳಲ್ಲಿದ್ದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿ ಜನಜೀವನವನ್ನು ಕೃಷ್ಣಾಚರಿತೆಯ ಮೂಲಕ ಮೋಹನ ತರಂಗಿಣಿಯಲ್ಲಿ ತಮ್ಮ ಪ್ರತಿಭೆ ಪಾಂಡಿತ್ಯದಿಂದ ಕಾವ್ಯ ಸೃಷ್ಟಿಸಿದ್ದಾರೆ. ಕಾವ್ಯವನ್ನು ೪೨ ಸಂಧಿಗಳನ್ನಾಗಿ ಮಾಡಿದ್ದಾರೆ. ಅದರಲ್ಲಿ ಒಟ್ಟಾರೆ ೨೭೦೯ ಸಾಂಗತ್ಯ ಪದ್ಯಗಳಿಂದ ವಿಸ್ತರಿಸಿ, ವಿಸ್ತಾರವಾಗಿ ಕೃಷ್ಣ - ರುಕ್ಮಿಣಿ, ಪ್ರದ್ಯುಮ್ನ - ರತಿ, ಅನಿರುದ್ಧ - ಉಷೆಯರ ಶೃಂಗಾರ ಮತ್ತು ಯುದ್ಧವರ್ಣನೆಗಳಲ್ಲಿ ಕಾವ್ಯ ಮೈದುಂಬಿಕೊಂಡಿದೆ.

ಇದು ಕನಕದಾಸರ ಮೊದಲ ಕೃತಿ. ಈ ಕೃತಿಯನ್ನು ರಚಿಸುವಾಗ ೩೫-೪೦ ರೊಳಗಿನ ಪ್ರಾಯವಿರಬೇಕು. ಈ ಕಾವ್ಯ ಕನಕದಾಸರ ಕೃತಿಯಲ್ಲಿಯೇ ಬಹುವಿಸ್ತಾರವಾಗಿ ಹರಡಿಕೊಂಡಿದ್ದು, ಸಾಂಗತ್ಯದ ಮೃದುತ್ವ, ಪದಬಂಧ, ಮೋಡಿ, ಲಲಿತ, ಬಂಧುರತೆಯನ್ನು ಹೊಂದಿರುವ ಈ ಕಾವ್ಯ ಕವಿಗೆ ಹೆಗ್ಗಳಿಕೆಯನ್ನು ತಂದಿದೆ. ಕನಕದಾಸರ ಒಳಮನಸ್ಸಿನ ತಳಮಳವನ್ನು ಕೂಲಂಕುಶವಾಗಿ ಕಾವ್ಯದ ಮೂಲಕ ಸಮಾಜದ ಮುಂದೆ ಇಟ್ಟಿದೆ. ಈ ಕಾವ್ಯದ ಕಥೆಯನ್ನು ತನ್ನ ಪ್ರಿಯತಮೆ / ಗೆಳತಿಯಾದ '**ಸುಜ್ಞಾನ ವಧೋಟಿ**'ಗೆ ಹೇಳಿದ ಹಾಗೆ ಕೃತಿಯನ್ನು ಹೆಣೆಯಲಾಗಿದೆ. ಈ ಕಥಾ ಭಾಗವನ್ನು ಭಾಗವತ, ಮಹಾಭಾರತ, ಪುರಾಣಗಳಿಂದ ಆಯ್ದುಕೊಂಡದ್ದಾಗಿದೆ. ಪ್ರಾಯದಲ್ಲಿ ತನ್ನ ಹೆಂಡತಿಯನ್ನು ಕಳೆದುಕೊಂಡು ನಂತರದ ದಿನಗಳಲ್ಲಿ ಶ್ರೀ ವೈಷ್ಣವ ಗುರು ಶ್ರೀ ತಾತಾಚಾರ್ಯರ ಪ್ರಭಾವಲಯದಲ್ಲಿದ್ದಾಗ ಈ ಕಾವ್ಯವನ್ನು ಕನಕದಾಸರು ಬರೆದಿರಬೇಕು. ತನ್ನ ಬದುಕಿನಲ್ಲಿ ಅನುಭವಿಸಿದ

ರಾಗ-ದ್ವೇಷಗಳನ್ನು ಪ್ರಿಯರ ನೆನಪಿನಾರ್ಥವಾಗಿ ಈ ಶೃಂಗಾರಕಾವ್ಯ ಬರೆದಿದ್ದಾರೆ. ಈ ಕಾವ್ಯದಲ್ಲಿ ನಾಡದೊರೆಯಾದ **ಶ್ರೀಕೃಷ್ಣದೇವರಾಯ**ನನ್ನು ಕೃತಿಯಲ್ಲಿ ನೆನಪಿಸುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಒಟ್ಟಿನಲ್ಲಿ ಜೀವನದುದ್ದಕ್ಕೂ ಕಂಡುಂಡ ಅನುಭವಿಸಿದ ಅನುಭಾವವನ್ನೇ ಹಾಡಾಗಿ ಹೃದಯವೇದ್ಯವಾಗಿ ಓತಪ್ರೋತವಾಗಿ ಸಾಗಿಬಂದಿದೆ. ಕಾವ್ಯದಲ್ಲಿ ಪ್ರಣಯಿಯ ಲವಲವಿಕೆ ಪ್ರೇಮ ಉಲ್ಲಾಸದ ಧ್ವನಿಯಾಗಿ ಅದು ಕಾವ್ಯದ ಹೊಳೆ ಹರಿದಿದೆ. ಇಂತಹ ಶೃಂಗಾರ ಕಾವ್ಯಕ್ಕೆ ಅನುಕೂಲವಾದ ಸಾಂಗತ್ಯ ಛಂದಸ್ಸನ್ನು ಬಳಸಿಕೊಂಡಿರುವುದು ಕನಕದಾಸರ ಪ್ರಜ್ಞೆಯನ್ನು ಮೆಚ್ಚುವಂತೆ ಮಾಡಿದೆ. ಈ ಕಾವ್ಯದ ಕಥಾ ಹಂದರದಲ್ಲಿ ಮೂರು ತಲೆಮಾರುಗಳವರೆಗೂ ಕಥೆ ಹೆಣೆದುಕೊಂಡಿದೆ. ಕಾಮ, ಕಾಮನತಂದೆ, ಕಾಮನ ಮಗ - ಈ ರೀತಿಯಾಗಿ ಕಾವ್ಯವಾಹಿನಿ ಹರಿದಿದ್ದಾಳೆ.

ಇಲ್ಲಿ ನರ-ನಾರಾಯಣ ಎಂಬ ಬೇಧವಿಲ್ಲದೆ, ಶೃಂಗಾರ ಸ್ವಚ್ಛಂದವಾಗಿ ಹೊರಹೊಮ್ಮಿದೆ. ಭಕ್ತ-ಭಗವಂತ ಎಂಬ ತಾರತಮ್ಯವಿಲ್ಲದೆ, ಭೋಗದ ಬದುಕನ್ನು ಚಿತ್ರಿಸಲಾಗಿದೆ. ಶ್ರೀಕೃಷ್ಣನ ಸಾಂಸಾರಿಕ ಚಿತ್ರಗಳಿಂದ ಕಾವ್ಯ ಆರಂಭವಾಗಿ ಬಾಣಾಸುರ ನಿಗ್ರಹ ಹಾಗೂ ಉಷ-ಅನಿರುದ್ಧರ ವಿವಾಹದಲ್ಲಿ ಕಾವ್ಯ ಕೊನೆಯಾಗುತ್ತದೆ. ಕಾವ್ಯದಲ್ಲಿ ಶ್ರೀಕೃಷ್ಣನು ತಾನು ಒಬ್ಬ ವ್ಯಕ್ತಿಯಾಗಿ ಪ್ರಜ್ಞಾವಂತ ತಂದೆಯಾಗಿ, ಪ್ರೀತಿಯ ಅಜ್ಜನಾಗಿ ಕಂಡುಬರುವುದರ ಜೊತೆಗೆ ಸಾಹಸಶೌರ್ಯದ ಅನೇಕ ವಿವರಗಳನ್ನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಓದುಗರ ಗಮನಕ್ಕೆ ತರುತ್ತಲೆ ಕಾವ್ಯಮುಂದುವರಿಯುತ್ತದೆ. ಈ ಕಾವ್ಯ ಶ್ರೀಕೃಷ್ಣನ ಲೀಲಾ ತರಂಗಿಣಿಯಂತೆಯೇ ಇದೆ.

**"ಮೋಹನ ತರಂಗಿಣಿ"** ಕೃತಿಯಲ್ಲಿ ಕನಕದಾಸರು ಪುರಾಣವಸ್ತುವಿನಲ್ಲಿ ಸಮಕಾಲೀನ ಜನಜೀವನವನ್ನು ಚಿತ್ರಿಸುತ್ತಾರೆ. ಈ ಕತೆ ಶ್ರೀಕೃಷ್ಣನ ಚರಿತೆಯಾದರೂ ಕೂಡ, ಕನಕದಾಸರು ಆ ಚರಿತೆಯನ್ನು ಶ್ರೀಕೃಷ್ಣದೇವರಾಯನಿಗೆ ಸಮೀಕರಿಸಿದಂತೆ ಮತ್ತು ಜನಸಾಮಾನ್ಯರ ಬದುಕು ಕೂಡ ಕಾವ್ಯದಲ್ಲಿ ಪಾತ್ರಗಳ ಮೂಲಕ ಹೊರಹೊಮ್ಮುವುದು ಕಂಡುಬರುತ್ತದೆ.

'ಇದು ಕೃಷ್ಣ-ರುಕ್ಮಿಣಿ, ಸತ್ಯಭಾಮೆ, ಮನ್ಮಥ-ರತಿ, ಪ್ರದ್ಯುಮ್ನ-ರತಿ, ಅನಿರುದ್ಧ-ಉಷೆ - ಹೀಗೆ ಮೂರು ತಲೆಮಾರುಗಳನ್ನು ಒಳಗೊಂಡಿದೆ. ಮಾನುಷ, ಅತಿಮಾನುಷ ಸಂಗತಿಗಳು ಶಂಬರಾಸುರ, ಬಾಣಾಸುರ ಪ್ರವೇಶದಿಂದ ಆಗುತ್ತದೆ. ಭಿನ್ನ ಸಂಸ್ಕೃತಿಯ ನಡುವಣ ಘರ್ಷಣೆಯಂತೆ ಕಂಡುಬಂದರೂ ಕಲ್ಯಾಣಕಾರಕವಾಗಿ ಅವು ಒಂದಾಗುತ್ತದೆ'. (ಕನಕ ಸಾಹಿತ್ಯ ದರ್ಶನ ಸಂಪುಟ - ೩ ಪುಟ ೮೪) - ಈ ರೀತಿಯಾಗಿ ಕಥೆಯನ್ನು ಸಮೀಕರಿಸಿಕೊಂಡು ಯಾವ ಪಾತ್ರಕ್ಕೂ ಧಕ್ಕೆ ಬರದಂತೆ ತನ್ನ ಪ್ರತಿಭಾಮಾನದಲ್ಲಿ

ಕಾವ್ಯದುದ್ದಕ್ಕೂ ಹರಿ-ಹರರನ್ನು ಬೇಧವೆನಿಸದೇ ಕಂಡುಕೊಳ್ಳುವುದು ಕನಕದಾಸರ ಕವಿಮನಸ್ಸು ಮಾತ್ರ. ಇಲ್ಲಿ ಭಿನ್ನ ಧರ್ಮ, ಭಿನ್ನಭಿನ್ನವಾದ ದೇವಮಾನುಷ್ಯರು ಬಂದಾಗ್ಯೂ ಕೂಡ ಯಾವುದೇ ರೀತಿಯಿಂದಲೂ ಕಾವ್ಯ ಸೊರಗದೇ ಅವೆರಡರ ಮಿಲನದಿಂದ ಕಲ್ಯಾಣಕಾರಕವಾಗಿ, ರಸವತ್ತಾಗಿ ಕಂಡುಬರುತ್ತದೆ.

"ಕರ್ನಾಟಕದಲ್ಲಿ ನೆಲೆಗೊಂಡಿದ್ದ ವಿವಿಧ ಮತತತ್ವಗಳ ಪ್ರೇರಣೆ - ಪ್ರಭಾವಗಳ ಹಿನ್ನೆಲೆಯಲ್ಲಿ ಮೂಡಿದ ದಾಸ ಸಾಹಿತ್ಯ ಜೀವನದ ಜೊತೆಗೆ ನೇರ ಸಂವಾದಕ್ಕಿಳಿಯಿತು. ಜೀವನದಲ್ಲಿ ಅನನ್ಯವಾಗಿ ಬೆರೆತುಹೋಯಿತು. ಹೀಗೆ ಬದುಕಿನೊಂದಿಗೆ ಲೀನಹೊಂದುತ್ತಿದ್ದ ವಾಗೇಯ ಕಲೆಯಲ್ಲಿ ತನ್ನನ್ನು ಗುರುತಿಸಿಕೊಳ್ಳುವ ಮೊದಲು ಕನಕದಾಸರು ಸಾಹಿತ್ಯರಚನೆಗೆ ಉದ್ದೇಶಪೂರ್ವಕವಾಗಿ ತೊಡಗಿದ್ದು ಕುತೂಹಲಕಾರಿಯಾಗಿದೆ ". (ಕನಕ ಕಿರಣ ೭೭) ಅಂದರೆ, ದಾಸರು ಸಾಹಿತ್ಯ ರಚನೆಗೆ ಕೈ ಹಾಕುವ ವೇಳೆಗೆ ದಾಸದೀಕ್ಷೆ ಪಡೆದು, ನಂತರ ಹಲವಾರು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ನಂತರ ಅವರು ಈ ಸಾಹಿತ್ಯಸೃಷ್ಟಿಗೆ ಮುಂದಾಗಿದ್ದಾರೆ. ಏಕೆಂದರೆ, ಅವರು ಮೊದಲಿಗೆ ಕವಿಯಾಗಿದ್ದವರು. ಅಂದರೆ, ನಾಯಕತ್ವ ಪಡೆದವರಾಗಿ ಆ ನಿಟ್ಟಿನಲ್ಲಿ ಕಂಡ ಜನಜೀವನಕ್ಕೂ ದಾಸರಾದ ಮೇಲೆ ಅಂದರೆ, ಎಲ್ಲ ಭೋಗವನ್ನು ತ್ಯಜಿಸಿ, ಬದುಕುವ ವಿರಾಗಿಯಾಗಿ ಅಂದರೆ ಸಂತರಾಗಿ, ದಾಸರಾಗಿ, ಸಾಮಾಜಿಕ, ನೈತಿಕ, ಧಾರ್ಮಿಕವಾದ ಭಕ್ತಿ ಮಾರ್ಗದಿಂದ, ತುಂಬುಮನದಿಂದ ಜನಸಾಮಾನ್ಯರ ಬದುಕನ್ನು ಕಂಡಿದ್ದು, ವಿಶೇಷವಾದದ್ದು. ಭಕ್ತಿ ಮಾರ್ಗದಿಂದ ಜೀವನ ಕಂಡುಕೊಳ್ಳುವಂತೆ ಊರೂರು ತಿರುಗುತ್ತಾ ಕರೆ ನೀಡಿದ್ದು ಅಷ್ಟೇ ಅಲ್ಲ ; ಜೊತೆಗೆ ಆ ಕರೆಯನ್ನೇ ಪುರಾಣ ವಸ್ತುವಿನ ಜೊತೆಗೆ ಸೇರಿಸಿ, ಸಾಹಿತ್ಯ ಸೌಧ ನಿರ್ಮಿಸಿದರು.

"ಸಮಕಾಲೀನ ಜೀವನವನ್ನು ಇಡಿಇಡಿಯಾಗಿ ಕೃತಿಯ ಎಲ್ಲ ವಿವರಗಳಲ್ಲಿ ಬಳಸಿಕೊಂಡು ಪೌರಾಣಿಕ ವಸ್ತುವನ್ನು ಸಮಕಾಲೀನದಲ್ಲಿ ನೆಟ್ಟು, ಔಚಿತ್ಯಪೂರ್ಣವಾಗಿ ಬೆಳೆಸುವಲ್ಲಿ ಹಾಗೂ ಈ ಸಮೀಕರಣದಲ್ಲಿ ಅಭಾಸ-ದ್ವಂದ್ವಗಳು ತಲೆದೋರದಂತೆ ನಿರ್ವಹಿಸಿರುವುದು ಮೋಹನ ತರಂಗಿಣಿಯ ವೈಶಿಷ್ಟ್ಯವಾಗಿದೆ. " (ಕ.ಕಿ. ೭೯) ಶ್ರೀಕೃಷ್ಣದೇವರಾಯನ ಆಳ್ವಿಕೆಯನ್ನು ಕಂಡೋ ಕೇಳಿಯೋ ಇದ್ದ ದಾಸರು ಮೋಹನ ತರಂಗಿಣಿಯನ್ನು, ಪುರಾಣ ವಸ್ತುವನ್ನು ಸಾಮಾನ್ಯ ಜನಜೀವನದಂತೆ ಚಿತ್ರಿಸಿ, ಅಂದಿನ ಕಾಲಮಾನದ ಜನಜೀವನದ ದಿನಚರಿಯನ್ನು ಚರಿತ್ರೆಯಾಗಿಸುವಲ್ಲಿ ಮತ್ತು ಅದನ್ನು ಪುರಾಣದ ಮೂಲಕ ಅದಕ್ಕೆ ಒಂದು ಆಕಾರ ನೀಡುವಲ್ಲಿ ಜೊತೆಗೆ ಜನಸಾಮಾನ್ಯರ ಪಾತ್ರಗಳಂತೆ ಪುರಾಣ ಮತ್ತು ಆಡಳಿತಗಾರರ ಚರಿತೆಯನ್ನು ಕಟ್ಟಿಕೊಡುವಲ್ಲಿ ಕಾವ್ಯ ಔಚಿತ್ರವಾಗಿದೆ.

ಕಾವ್ಯಕ್ಕೆ ಕಥಾ ವಸ್ತುವನ್ನು ಭಾಗವತ, ಹರಿವಂಶ, ಪುರಾಣ, ರಾಮಾಯಣ, ಮಹಾಭಾರತಗಳಿಂದ ಕಾವ್ಯಕ್ಕೆ ಪ್ರೇರಿಕವಾಗುವ ಅಂಶಗಳನ್ನು ಹೆಕ್ಕಿಕೊಂಡಿದ್ದಾರೆ. ಈ ಎಲ್ಲ ಅಂಶಗಳ ಕಥಾವಸ್ತುವನ್ನು ಜನಸಾಮಾನ್ಯರ ಬದುಕಿನಂತೆ ಕಾವ್ಯದಲ್ಲಿ ಅಳವಡಿಸುತ್ತಾರೆಂಬುದು ಗಮನಾರ್ಹ ಸಂಗತಿ. ಅದು ಕನಕದಾಸರ ಪ್ರತಿಭೆ-ಪಾಂಡಿತ್ಯದಿಂದ ಸಾಧ್ಯವಾದದ್ದು ಸಾಮಾನ್ಯ ಹೆಂಗಸೊಬ್ಬಳ ಮಕ್ಕಳ ಬಯಕೆಯಾಗಿ, ಇಲ್ಲಿ ರುಕ್ಮಿಣಿಗೆ ಮಕ್ಕಳ ವ್ಯಾಮೋಹ ಅಂತರಂಗದಲ್ಲಿ ಉದಿಸುವುದು, ಆ ಸಮಯವಾದರೋ ಪ್ರಕೃತಿಯಲ್ಲಿ ಕಂಡ ಒಂದು ಸಣ್ಣ ಘಟನೆಯಿಂದ ; ಅದೆಂದರೆ ಪಕ್ಷಿಗಳು ಮರಿಹಕ್ಕಿಗಳಿಗೆ ಗುಕುಟು ನೀಡುವುದನ್ನು ಕಂಡಾಗ ಇಲ್ಲಿ ರುಕ್ಮಿಣಿಗೆ ಪುತ್ರವ್ಯಾಮೋಹ ಸ್ವಾಭಾವಿಕವಾಗಿಯೇ ಮೂಡುತ್ತದೆ.

ನಾ ಪುತಸ್ಯ ಲೋಕೋನಾಸ್ತಿಯೆಂದೆಂಬ ಶಾ  
ಸ್ತ್ರೋಪದೇಶವ ಕೇಳ್ದಿಜೀಯ  
ನೀ ಪಾಲಿಸಬೇಕು ನನಗೋರ್ವ ಕಂದರ್ಪ  
ರೂಪಾಂತವರ ಕುಮಾರಕನ

ಅಂದರೆ, ಅಂತಿಂಥ ಮಗನಲ್ಲ ಅದುವೆ ಮನ್ಮಥನಂತ ಮಗನೆ ಬೇಕೆನ್ನುವುದು ಕೂಡ ಅವಳ ಬಯಕೆಯಾಗಿದೆ. ಸಾಮಾನ್ಯ ಜನಸಾಮಾನ್ಯರೂ ಕೂಡ ಅತೀತವಾದುದನ್ನೇ ಬಯಸುತ್ತಾರೆ. ಮಕ್ಕಳು ಹೇಗಿದ್ದರೂ ಅವರನ್ನು ಚಿನ್ನ ರನ್ನ ಎಂದು ಮುದ್ದು ಲಲ್ಲೆಗರೆಯುತ್ತಾರೆ. ಇಂತಹ ಅಂಶಗಳನ್ನು ಜನಸಾಮಾನ್ಯರ ಬದುಕಿನಲ್ಲಿ ನಿತ್ಯವೂ ಕೂಡ ಕಾಣಬಹುದಾಗಿದೆ.

ಮಗು ಹಾಲು ಕುಡಿಯುವಾಗ ಹಾಲು ನೆತ್ತಿಗೇರಲು ರತಿ ಉಸಿರೂರುತ್ತ ಬೆಚ್ಚುವಳು. ಮಗುವಿನ ಜನನೇಂದ್ರಿಯಕ್ಕೆ ಮುತ್ತಿಕ್ಕುವಳು; ಅಂತಹ ಸಂದರ್ಭವನ್ನು ಕನಕರು ಮಾತ್ರ ಈ ರೀತಿಯಾಗಿ ಕಟ್ಟಿಕೊಡುತ್ತಾರೆ.

ರಾಜಾಧಿಪನೆಂಬೆನೆ ನಷ್ಟಪುಷ್ಪ ಸ  
ರೋಜಾಪ್ತನೆಂಬೆನೆ ಭಿಸಿಗ  
ತೇಜೋಮಯ ಕಂದ ಬಾರೆಂದು ರತಿ ಬೃಹ  
ದ್ವೀಜಕ್ಕೆ ಮುತ್ತನಿಕ್ಕುವಳು

ತೊರೆದ ನುಣ್ಮೊಲೆಯನೀಂಟುತ ಪೆಸರ್ಗಾಯಪ್ಪ  
ಬೆರಲೊಳು ಮೊಲೆದೊಟ್ಟ ಪಿಡಿದು  
ಮರುಳ್ದುಣೆ ನೆತ್ತಿಗೇರಲಿಕುಸಿರೂದುತೆ  
ತರಳಾಕ್ಷಿ ಬೆಚ್ಚುವಳು ಬಯದಿ.

ಶಿಶುವನ್ನು ಪಾಲನೆ ಪೋಷಣೆಯನ್ನು ತಾಯಂದಿರು ಹೇಗೆ ವಹಿಸುತ್ತಾರೆ ಎನ್ನುವುದನ್ನು ಸೂಕ್ಷ್ಮ ವಿವರಗಳೊಂದಿಗೆ ಕವಿ ಕಟ್ಟುವುದು ಸಾಮಾನ್ಯವಲ್ಲ ; ಅಂತಹ ಸನ್ನಿವೇಶವನ್ನು ಕುರಿತು ಬರೆಯುವುದಾದರೆ, ಮಕ್ಕಳಷ್ಟೇ ಮೃದುತ್ವ ಧೋರಣೆಯಿರಬೇಕು. ಜೊತೆಗೆ ಮಾತೃ ಹೃದಯಿಯಾಗಿರಬೇಕು. ಇವೆಲ್ಲವನ್ನು ಓದುಗನಿಗೆ ಮನಮುಟ್ಟುವಂತೆ ನಿರ್ಮಿಸಿಕೊಡುವುದು ಕವಿಯ ಮೇಧಾವಿತನದಿಂದ ಮಾತ್ರ ಸಾಧ್ಯ. ಅದು ಕನಕದಾಸರರದು.

ಅಂದಿನ ಸುಖ ಶಾಂತಿ ಸಮೃದ್ಧಿ ಸಹಬಾಳ್ವೆಯ ಜೊತೆಗೆ ಭೋಗದ ಜೀವನವನ್ನು ಕಂಡ ದಾಸರು ಅದನ್ನು ಸಾಮಾನ್ಯ ಜನಜೀವನದ ಪ್ರತೀಕವಾಗಿ ಕಟ್ಟಿಕೊಡುತ್ತಾರೆ.

ನಳಿನೋದ್ಭವ ಕೋಟಿವತ್ಸರ ತನುವಿಡೀ
ದಳಿದೊಡೆದೇನು ವೃಥಾಯ
ಸುಳಿಗುರುಳ ಬಲೆಯ ತೋಳತೆಕ್ಕೆಯೊಳರೆ
ಗಳಿಗೆ ಬಾಳಲು ಮುಕ್ತಿಯವುದು.

ಈ ಮೇಲಿನ ಮಾತುಗಳನ್ನು ಗಮನಿಸಿದಾಗ, ಸಂಸಾರವೊಂದು ಸಹಜೀವನದ ಬಾಳ್ವೆಯಲ್ಲಿ ತೊಡಗುವಂತೆ ಮಾಡುವುದು. ಹೆಣ್ಣು-ಗಂಡು ಎರಡು ಕೂಡ ಮುಖ್ಯ. ಈ ನಿಟ್ಟಿನಲ್ಲಿ ಯೋಚಿಸಿದಾಗ, ತಟ್ಟನೆ ನೆನಪಿಗೆ ಬರುವ ಶರಣರ ಮಾತು 'ಸತಿ-ಪತಿಗಳೊಂದಾದ ಭಕ್ತಿಹಿತವಾಗಿಪ್ಪುದು ಶಿವಂಗೆ' ಎನ್ನುವಂತೆ ಬದುಕಿನಲ್ಲಿ ಸಹಭಾಳ್ವೆ ಎಷ್ಟು ಮುಖ್ಯ ಎಂದು ಮನಗಾಣಬಹುದಾಗಿದೆ. ಸಮಾಜದಲ್ಲಿ ಬದುಕು ಸುಂದರವಾದ ನಂದನವನವಾಗಲು ಹೆಣ್ಣು-ಗಂಡುಗಳೆರಡರ ಪಾಲು ಮುಖ್ಯ ಎನ್ನುವುದು ಗಮನಾರ್ಹ ಅಂಶ. ಕಾವ್ಯದಲ್ಲಿ ಇಂತಹ ಸನ್ನಿವೇಶಗಳು ಹಲವಾರು ಬಾರಿ ಮರುಕಳಿಸಿದರು ಕಾವ್ಯವಾಹಿನಿ ಧಕ್ಕೆಯಾಗದಂತೆ ಪ್ರವಹಿಸುತ್ತಾಳೆ. ಸಾಮಾನ್ಯರ ಬದುಕಿನಲ್ಲಿ ಕಾಣುವ ಸರಸಯುಕ್ತ ಭೋಗವನ್ನು ಕನಕದಾಸರು ಪುರಾಣಪಾತ್ರಗಳಲ್ಲಿ ಕೂಡ ಕಾಣುವಂತೆ ಮಾಡುತ್ತಾರೆ. ಪೌರಾಣಿಕ ಪಾತ್ರಗಳು ಹೊರತಲ್ಲ ಎಂಬ ಭಾವನೆಯನ್ನು ಸರಸಯುಕ್ತ ಭೋಗ ಸನ್ನೇವೇಶವನ್ನು ಕಟ್ಟಿಕೊಡುತ್ತಾರೆ.

ಹೊಳೆಯ ಕೆಂಬಲ್ಲು ಚೆಂದುಟಿ ಕಂಬುಕಂಠ ಕೌಂ
ಕುಳ ಕೋಮಲತ್ವ ನುಣ್ಮೊಲೆಯ
ಸ್ಥಳದಲ್ಲಿ ಮೊಗವಿಟ್ಟು ಮುಂಡಾಡಿ ಸೊಗ ಮಯ್ಯೊ
ಳಳವಟ್ಟು ಸಾವುದಚ್ಚರಿಯೆ.

ಎಲ್ಲ ಸುಖ ಶಾಂತಿ ಸಮೃದ್ಧಿ ಸಹಬಾಳ್ವೆ ತಾಂಡವವಾಡುತ್ತಿರುತ್ತದೋ ಅಲ್ಲಿ ಯಥೇಚ್ಛವಾಗಿ ಭೋಗವೂ ಕೂಡ ಭೋರ್ಗರೆದು ಪ್ರವಹಿಸುತ್ತದೆ ಎನ್ನುವುದಕ್ಕೆ ಈ ಕಾವ್ಯದಲ್ಲಿ ಕಂಡು ಬರುವ ವಿವರಗಳೇ ಸಾಕಾಗುತ್ತವೆ. ಅದು ಪುರಾಣಗಳ ಮೂಲಕ ಆಡಳಿತಾರೂಢ ಪರಿವಾರ ಮತ್ತು ಜನಸಾಮಾನ್ಯರಲ್ಲಿಗೂ ಒಳಗೊಂಡ ಸಹಜೀವನ. ದಾಸರು ಇಂತಹ ವಿಶಿಷ್ಟವಾದ ಚಿತ್ರಗಳನ್ನು ಓದುಗನಿಗೆ ಕಟ್ಟಿಕೊಡುವಾಗ ಅಲ್ಲಿ ನರ-ನಾರಾಯಣ ಬೇಧ ವರ್ಣಿಸದೆ, ಪುರಾಣ ಪಾತ್ರಗಳಂತೆ ಸಾಮಾನ್ಯರಿಗೂ ಕೂಡ ಅಂತಹ ವಿಷಯಾಸಕ್ತಿಯ ಅಂಶಗಳಿಂದ ಪರಿಪೂರ್ಣ ಜೀವನ ಕಾಣಲು ಸಾಧ್ಯವಾಗುವಂತಹದ್ದನ್ನು ಕಾಣಬಹುದು.

ವಿಜಯನಗರ ಸಾಮ್ರಾಜ್ಯದಲ್ಲಿ ಸಾಮಾನ್ಯರಲ್ಲಿಯೂ ಕೂಡ ಅಲಂಕಾರಪ್ರಿಯತೆ ಇತ್ತು ಎನ್ನುವುದನ್ನು ದಾಸರು ಉಷಾದೇವಿಗೆ ಸ್ನಾನ ಮಾಡಿಸಿ, ತುರುಬನ್ನಿಕ್ಕಿ ಜಾತಿ ಮುತ್ತುಗಳಿಂದ ರತ್ನಕೇತಕಿಯನ್ನು ಕಟ್ಟಿದರು. ಕಾಶ್ಮೀರ ಮಂಗಳ ತಿಲಕವನ್ನಿಟ್ಟರು. ಕಣ್ಣಿಗೆ ಕಾಡಿಗೆ ಹಚ್ಚಿದರು. ಮೂಗಿಗೆ ಮೂಗುತಿ, ಕರ್ಣ್ಣದಲ್ಲಿ ಮಾಣಿಕ್ಯಧೋಲೆ.........

ಆಯವ ನೋಡಿ ಶಸ್ತ್ರದೊಳಿರಿದೆರಿಂದೆ
ಸಾಯದೆ ಸ್ತ್ರೀ ಲೋಭದಲಿ
ತೋಯಜಾಕ್ಷಿಯ ಕಂಠಮಾಲೆಯ ಕುಚ ಮಧ್ಯ
ನಾಯಕ ರತ್ನ ರಂಜಿಸಿತು (೩೯)

ಏಣಲೋಚನೆಯ ಬಲ್ಮೊಲೆಯ ಭಾರಕೆ ನಿ
ತ್ರಾಣಿಸಿ ನಡು ನಿಲ್ಲದೆನುತೆ
ಕೇಣವಿಲ್ಲದೆ ರತ್ನಕೀಲಿತ ಸ್ವರ್ಣದೊ
ಡ್ಯಾಣವ ತಂದಿಕ್ಕಿದರು (೪೪)

ಇತ್ಯಾದಿಯಾಗಿ ಅಲಂಕಾರ ಮುಂದುವರಿಯುತ್ತದೆ. ಅಂದಿನ ಸಾಮಾನ್ಯರು ಕೂಡ ಸಾಧ್ಯವಾದಷ್ಟು ಅಲಂಕಾರ ಆಭರಣ ಸಾಮಗ್ರಿ ಹೊಂದಿದ್ದರೆಂದು ಕಂಡು ಬರುತ್ತದೆ. ವೈಭವ ಸಾಮ್ರಾಜ್ಯದ ಅಂಗವಾಗಿಯೇ ವೈಭವೋಚಿತವಾದ ಸಹಬಾಳ್ವೆ ನಡೆದಿರುವುದು ಕಾವ್ಯದಲ್ಲಿ ಕಂಡುಬರುತ್ತದೆ.

ಶ್ರೀಕೃಷ್ಣನ ಸೂಚನೆಯಂತೆ ಕಾಮ-ರತಿಯರ ಗೃಹಪ್ರವೇಶಕ್ಕೆ ಆ ಕಾಲದಲ್ಲೂ ಕೂಡ ಮನೆಗೆ ಬೇಕಾಗುವ ದಿನಬಳಕೆ ಪಾತ್ರ ಪದಾರ್ಥಗಳು, ಜೊತೆಗೆ ಸಾಕುಪ್ರಾಣಿಗಳನ್ನು ಕೊಡುವ ಪದ್ಧತಿಯನ್ನು ಕಂಡ ದಾಸರು ಅಂತಹ ಅಂಶಗಳನ್ನು ಕೂಡ ಕಾವ್ಯದಲ್ಲಿ ಸೆರೆ ಹಿಡಿಯುತ್ತಾರೆ. ಇದು ಅಂದಿಗೆ ಮಾತ್ರವಲ್ಲ, ಇಂದಿಗೂ ಕೂಡ ನಮ್ಮ ಗ್ರಾಮೀಣರಲ್ಲಿ ಹಾಸುಹೊಕ್ಕಾಗಿದೆ. ಇದು ನಾಗರಿಕ ಸಾಮಜವೆನ್ನುವ ನಗರ ಸಮಾಜದಲ್ಲಿ ಇದೂ ಒಂದು ಶೋಷಣೆಯೇ ಆಗಿ ಕಂಡುಬರುತ್ತಿರುವುದು ನಿಜಸಂಗತಿಯಾಗಿದೆ. ಇದೆಲ್ಲಕ್ಕೂ ಮೀರಿದ್ದು, ನಮ್ಮ ಜನಪದ ಸಾಹಿತ್ಯದ್ದು. ಏಕೆಂದರೆ, ಅವರು ಮಾಡುತ್ತಿದ್ದ ಎಲ್ಲ ಅತ್ಯಾದರದ ಸೌಲಭ್ಯಗಳು ಪ್ರೀತಿಯಿಂದ ಮಾತ್ರ ಅದು ಮಾನವೀಯ ಸಂಬಂಧಗಳು ಜೀವಂತವಾಗಿರಲು ಎಂಬಂತಿತ್ತು. ಬಾಣಂತನ ಮುಗಿಸಿ, ನಂತರ ಮಗುವಿನೊಂದಿಗೆ ಗಂಡನ ಮನೆಗೆ ಹೊರಟ ಹೆಣ್ಣು ಮಗಳಿಗೆ ತವರೂರಿನಲ್ಲಿ ಮಗುವಿನ ಹಾಲಿಗಾಗಿಯೆ ಹಾಲು ಕೊಡುವ ಹಸುವನ್ನು ಅಥವಾ ಎಮ್ಮೆಯನ್ನು ಕೊಡುತ್ತಿದ್ದರು. ಅಂತಹ ಉಡುಗೊರೆಯನ್ನು ಪಡೆದುಕೊಂಡು ಹೋಗುವ ಹೆಣ್ಣುಮಗಳೊಬ್ಬಳ ಅಂತಃಕರಣವನ್ನು ಒಂದು ತ್ರಿಪದಿ ಚಿತ್ರಿಸುವ ಬಗೆ:

" ತೊಟ್ಟಿಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡ್ಕೊಂಡು - ತಂಗ್ಯಮ್ಮ
ತಿಟ್ಹತ್ತಿ ತಿರುಗಿ ನೋಡ್ಯಾಳು "

ಈ ಪದ್ಯದ 'ತಿಟ್ಹತ್ತಿ ತಿರುಗಿ ನೋಡ್ಯಾಳು' ಎನ್ನುವ ವಾಕ್ಯವನ್ನು ಪ್ರೊ। ತೀ.ನಂ.ಶ್ರೀಕಂಠಯ್ಯ ನವರು ಹೀಗೆ ವ್ಯಾಖ್ಯಾನಿಸುತ್ತಾರೆ. "ದಾರಿಯಲ್ಲಿ ಸಿಕ್ಕಿದ ತಿಟ್ಟನ್ನು ಹತ್ತಿ ಇಳಿಯುವ ಮುಂಚೆ ತೌರೂರಿನ ಕೊನೆಯ ದರ್ಶನ ತೆಗೆದುಕೊಳ್ಳಲು ಈ ಹುಡಿಗಿ ತಿರುಗಿ ನೋಡುತ್ತಾಳೆ. ಆ ನೋಟದಲ್ಲಿ ಎಷ್ಟು ಆಸೆ, ಎಷ್ಟು ಬೇಥ! ಪದ್ಯದ ಮಾತು ಮಾತ್ರ ಎಷ್ಟು ಸರಳ" (ಭಾಕಾಮೀ-೩೪) ಇದೂ ಕೂಡ ನಮ್ಮ ಸಾಹಿತ್ಯಿಕ ಬದುಕು ರೂಪುಗೊಂಡಿರುವುದೇ ಇಂತಹ ಹಲವಾರು ಜನಪದೀಯ ಅಂಶಗಳ ಸಮ್ಮಿಲನದಿಂದ ಎನ್ನುವುದು ಗಮನಾರ್ಹ.

ಅಂದಿನ ಜನಜೀವನಕ್ಕೆ ಇದ್ದ ಮನರಂಜನೆಗಳು ದಾಸರು ಕಾವ್ಯದಲ್ಲಿ ಸೆರೆಹಿಡಿಯದೇ ಬಿಡುವುದಿಲ್ಲ.

ಲೆತ್ತ ಪಗಡೆ ರಾಯ ಬೊಗರಿ ಸೊಲ್ಲೆಹ ಬಾರು
ಗುತ್ತದೊಪ್ಪಿಯ ಸರಿ ಬೆಸದಿ
ವಿತ್ತನಾಶವ ಮಾಡುವ ಜೂದುಗಾರರ
ಮೊತ್ತ ವಿರ್ದುದು ಮನೆ ಮನೆಗೆ

ಇಂತಹ ಕ್ರೀಡೆಗಳಿಂದ ಮನರಂಜನೆಯ ದೆಸೆಗಳಿಂದ ಉಂಟಾಗುವ ಕಲಹ ಕದನಗಳು ನಡೆಯುತ್ತಿದ್ದವು. ಅಂತಹ ಸಂಗತಿಗಳು ಇಂದೂ ಕೂಡ ರೂಪಾಂತರವೋ ಅಥವಾ ಬದಲಾವಣೆ ಕಂಡು ಇನ್ನೂ ಜನಸಾಮಾನ್ಯರ ಬದುಕಿನಲ್ಲಿ ಇರುವುದನ್ನು ಕಾಣಬಹುದು.

ಕೃತಿ ಪೌರಾಣಿಕ ವಸ್ತುವಿನದಾದರೂ, ಅದರಲ್ಲಿ ಎಲ್ಲಾ ರೀತಿಯ ಸಾಮಾಜಿಕ ಆಚರಣೆ ಹಾಗೂ ಬೇಟೆಗಳಿಂದ ಕಾವ್ಯಮೈದುಂಬಿದೆ ಎಂಬುದನ್ನು ದಾಸರು ಓದುಗರಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ಅದು ಪುರಾಣ ಕತೆ ಕೃಷ್ಣನದಾದರೂ ಅಂದಿನ ಸಮಕಾಲೀನ ಸಾಮಾನ್ಯ ಜನರ ದಿನಚರಿ ಬದುಕಿನ ಅಂಶಗಳನ್ನು ಒಳಗೊಂಡು ರಚಿತವಾಗಿರುವುದು ಈ ಮೇಲಿನ ಎಲ್ಲ ಅಂಶಗಳಿಂದಲೂ ಕಾಣಬಹುದಾಗಿದೆ. ಎಲ್ಲ ಅಂಶಗಳನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ರೀತಿಯಲ್ಲಿ ಕನಕದಾಸರು ಮಹಾ ಮೇಧಾವಿಯಾಗಿ ಕಂಡುಬರುತ್ತಾರೆ.

—

**೨. ಹರಿಭಕ್ತಿಸಾರ:** ಇದು ಕನ್ನಡ ಭಾಷೆಯಲ್ಲಿ ದೊರೆಯುವ ಭಕ್ತಿ ಸಾಹಿತ್ಯದ ಜನಪ್ರಿಯ ಕೃತಿ ಸರಳ ಶೈಲಿಯಲ್ಲಿ ಭಾಮಿನಿ ಷಟ್ಪದಿಯಲ್ಲಿ ಬರೆದ ಕಾವ್ಯ ಹರಿಭಕ್ತಿಯ ಹಿರಿಮೆ ಗರಿಮೆಗಳನ್ನು ಹಾಗೂ ಆತ್ಮಭಾವ ಅನನ್ಯವಾದ ಶರಣಾಗತಿಯನ್ನು ಪ್ರದರ್ಶಿಸುವ ಭಕ್ತಿಯ ಸಾರವಾಗಿದೆ. ಭಕ್ತಿಗೆ ಇದು ಮುಕ್ತಿಯ ಸೆಲೆಯಾಗಲೆಂದೇ ಆಸಕ್ತಿಯಿಂದ ಕನಕದಾಸರು ಈ ಕಾವ್ಯವನ್ನು ರಚಿಸಿದ್ದಾರೆ. ಈ ಕೃತಿಯನ್ನು ಯಾರೂ ಪ್ರೀತಿಯಿಂದ ಕೇಳುತ್ತಾರೆಯೋ, ಓದುತ್ತಾರೆಯೋ ಅವರಿಗೆ ಇಷ್ಟಾರ್ಥಗಳು ಸಿದ್ಧಿಯಾಗುತ್ತದೆ ಎಂಬುದು ಕೃತಿಕಾರರ ಆಶಯ. ಭಕ್ತಿಯೆನ್ನುವುದು ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಅನಂತ ಅನಾದಿ ಕಾಲದಿಂದಲೂ ಸರ್ವೋತ್ಕೃಷ್ಟವಾದ ಸರ್ವಕಾಲದಲ್ಲಿಯೂ ಬತ್ತದೆ ಹರಿಯುವ ಜೀವನದಿಯಾಗಿರುವುದು ಕಂಡುಬರುತ್ತದೆ. ಹರಿಭಕ್ತಿಸಾರದಲ್ಲಿ ಹರಿಭಕ್ತಿಯ ಸಾರವನ್ನು ಸಂಗ್ರಹಿಸಿ ಸೃಷ್ಟಿಸಿರುವ ಅಮೃತ ಕಲಶ ಎನ್ನಬಹುದು. ಈ ಕೃತಿ ಆಕೃತಿಯಿಂದ ಒಂದು ಶತಕವಾಗಿದೆ. ಆದರೆ, ಪದ್ಯಗಳು ಭಾಮಿನಿ ಷಟ್ಪದಿಯಲ್ಲಿವೆ. 'ರಕ್ಷಿಸು ನಮ್ಮನನವರತ' ಎನ್ನುವ ಅಂಶ ಈ ಕೃತಿಯ ಎಲ್ಲ ಪದ್ಯಗಳ ಕೊನೆಯಲ್ಲಿ ಬರುವ ಮುದ್ರೆಯಾಗಿದೆ. ಇದು ಭಕ್ತನ ವ್ಯಕ್ತಿತ್ವವನ್ನು ಸಾರುವ ಒಂದು ಸರಳ ರಚನೆಯಾಗಿರುವುದು ಕಂಡುಬರುತ್ತದೆ. ಸರಳ ಭಕ್ತಿಗೆ ಮುಖ್ಯ ಲಕ್ಷಣವಾಗಿರುವ ಈ ಕೃತಿಯನ್ನು ಈ ಕಾರಣಕ್ಕಾಗಿಯೇ ವಿದ್ವಾಂಸರು ಪ್ರಾಥಮಿಕ ಶಿಕ್ಷಣದಲ್ಲಿ ಪಾಠದ ಪಠ್ಯವಾಗಿಸಿ, ಭಕ್ತಿಯಿಂದ ಹಾಡುವ ಸುವರ್ಣ ಮಾಧ್ಯಮವಾಗಿ ಇದನ್ನು ಆಧರಿಸುತ್ತಾ ಬಂದಿದ್ದಾರೆ.

ಸಾಧನೆಯಲ್ಲಿ ನಿರತರಾದ ದಾಸರು ಪರಮಾತ್ಮನಲ್ಲಿ ಯಾವ ಬಗೆಯ ಭಕ್ತಿಯನ್ನು ಅಭಿವ್ಯಕ್ತಪಡಿಸಿದರು? ಈ ಪ್ರಶ್ನೆಗೆ ಹರಿಭಕ್ತಸಾರದಲ್ಲಿ ವಿಶೇಷ ಬೆಳಕನ್ನು ಚೆಲ್ಲಿದ್ದಾರೆ. ದಾಸರು ಭಾಗವತ ಮನೋಧರ್ಮವುಳ್ಳವರು. ಭಗವಂತನಲ್ಲಿ ಭಕ್ತಿಯುಳ್ಳ ಕನಕದಾಸರು ಭಾಗವತದ ಎಲ್ಲ ಸಂಗತಿಗಳನ್ನು ಅಲ್ಲಿಯ ತತ್ವಗಳನ್ನು ಯಥಾವತ್ತಾಗಿ ಹರಿಭಕ್ತಸಾರದಲ್ಲಿ ಪಡಿಮೂಡಿಸಿದ್ದಾರೆ. ಹರಿಭಕ್ತಿಸಾರವು ನಮ್ಮ ಹಿಂದೂ ಭಾರತೀಯ ಸಂಸ್ಕೃತಿಯ ನಮ್ಮ ಜೀವನ ಮೌಲ್ಯಗಳ ಸಾರಾಂಶವನ್ನೇ ಹೇಳುವಲ್ಲಿ ಅದು ಸಾಕ್ಷಾತ್ಕಾರಗೊಂಡಿದೆ. ಆ ಪ್ರಯತ್ನದಲ್ಲಿ ಭಕ್ತಿಗೆ ಮುಖ್ಯ ಸ್ಥಾನ ನೀಡಲಾಗಿದೆ. ಆ ಭಕ್ತಿ ನಮ್ಮನ್ನು ನಾವು ತಿಳಿಯುವ ಭಗವಂತನನ್ನು ಪಡೆಯುವ ಸಾಧನವೆಂದು ಸಮರ್ಥವಾಗಿ ನಿರೂಪಿಸಿದ್ದಾರೆ.

ಈ ಕಾವ್ಯದಲ್ಲಿ ದಾಸರು **"ಪರಮಾತ್ಮನೇ ತತ್ವ ಭಕ್ತಿ ಪ್ರಪತ್ತಿಗಳೇ ಹಿತ, ಮೋಕ್ಷವೇ ಪುರುಷಾರ್ಥ"** ಈ ಮಾತು ಇಲ್ಲಿಯ ಧ್ಯೇಯ ವಾಕ್ಯ. ಇಲ್ಲಿ ವಿಷ್ಣುವಿನ ಲೀಲಾವತಾರಗಳನ್ನು ಆದರ್ಶಕ್ಕೆ, ಉಪಾಸನಗೆ ಒಗ್ಗಿಸಿಕೊಂಡಿದೆ. ಹರಿಯೇ ಸರ್ವೋತ್ತಮ,

ಭಿನ್ನ ಜೀವರಾಶಿಗಳು ಹರಿಯ ಅನುಚರರು ಮೋಕ್ಷಕ್ಕೆ ನಿರ್ಮಲ ಭಕ್ತಿಯೇ ಮುಖ್ಯ ಸಾಧನ ಎಂಬ ದ್ವೈತ ಮತದ ಭಕ್ತ್ಯಾನುಸಂಧಾನವು ಇಲ್ಲಿ ಸ್ಪಷ್ಟವಾಗಿ ನಿರೂಪಣೆಯಾಗಿದೆ.

ವಿಷ್ಣು ಸರ್ವೋತ್ತಮನಾದ ದ್ವೈತ. ಅವನು ಬ್ರಹ್ಮಾದಿ ದೇವತೆಗಳಲ್ಲಿ ಹಿರಿಯ/ ಅಧಿದೇವಾ. ಈ ಜಗತ್ತೆಲ್ಲ ಆತನ ಕುಟುಂಬವೇ ಆಗಿದೆ. ಅವನು ಅವತಾರ ಲೀಲೆಯಿಂದ ದುಷ್ಟ ನಿಗ್ರಹ ಶಿಷ್ಟ ಪರಿಪಾಲನಾ ತತ್ಪರನಾಗಿದ್ದಾರೆ. ಭಕ್ತರು ಮುನಿಗಳು ಯೋಗಿಗಳು ಸಕಲ ಸಜ್ಜನರೂ ವಿಷ್ಣುವನ್ನು ಆರಾಧ್ಯದೈವವಾಗಿ ಪೂಜಿಸುತ್ತಾರೆ. ಅವನು ಭಕ್ತಪ್ರೇಮಿ. ಭಕ್ತನನ್ನು ಅನವರತ ಅನುಗ್ರಹಿಸಿ, ಕಾಪಾಡುವ ಭಕ್ತವತ್ಸಲ, ಬಲಿ ಬಾಣಾಸುರ, ಹಿರಣ್ಯಾಕ್ಷ, ಶಿಶುಪಾಲ, ಕಂಸ, ಮೊದಲಾದ ದಾನವರನ್ನು ಸ್ವತಃ ನಿಗ್ರಹಿಸಿ ; ಜರಾಸಂಧ, ಸೈಂಧವ ಮತ್ತು ಕೌರವನನ್ನು ತನ್ನ ಭಕ್ತರ ಮೂಲಕ ನಿಗ್ರಹಿಸಿ ಲೋಕಕ್ಕೆ ಒದಗಿದ ಕಂಟಕವನ್ನು ನಿವಾರಣೆ ಮಾಡುತ್ತಾನೆ. ಈ ರೀತಿಯೇ ಪ್ರಹ್ಲಾದ, ವಿಭೀಷಣ, ಅರ್ಜುನ, ಅಜಮಿಳ, ಧ್ರುವ ಮೊದಲಾದವರನ್ನು ನರ ಸುರಾಸುರ ಬೇಧವಿಲ್ಲದೇ ರಕ್ಷಿಸಿ ಅನುಗ್ರಹಿಸಿದ್ದಾನೆ. ಆತನು ಕೃಪೆ ತೋರಿದರೆ, ಹುಟ್ಟು-ಸಾವುಗಳನ್ನು ಗೆಲ್ಲಬಹುದು. ಇದು ಕೃತಿಕಾರರ ದೃಢ ವಿಶ್ವಾಸ. ಕೃತಿಯುದ್ದಕ್ಕೂ ದಾಸರು ವಿಷ್ಣುವನ್ನು ಗೌರವ ಭಕ್ತಿಪೂರ್ವಕವಾಗಿ ನೆನೆಯುತ್ತಾರೆ. ವಿಷ್ಣುವಿನ ಮೇಲಿನ ಭಕ್ತಿ ಅವರ್ಣನೀಯವಾಗಿದ್ದು, ತನ್ನ ಆರಾಧ್ಯ ದೈವವಾದ ವಿಷ್ಣು ತನ್ನನ್ನು ಅನವರತ ರಕ್ಷಿಸಲಿ ಎಂದು ಮೊರೆಹೋಗುತ್ತಾರೆ.

ಕನಕದಾಸರು ತಮ್ಮ ಹುಟ್ಟು, ಬಾಲ್ಯಗಳು, ಯೌವ್ವನವು ಅಜ್ಞಾನದಲ್ಲಿಯೂ, ವಿಷಯಾಸಕ್ತಿಯಲ್ಲಿಯೂ ಕಳೆದುಹೋಯಿತೆಂದು ಭಗವಂತನ ನೆನಪು ಬಾರದೇ ಹೋಯಿತೆಂದೂ ಮಮ್ಮಲ ಮರುಗುತ್ತಾರೆ. ದೇಹ ಭಗವಂತನ ಆಲಯವಾಗಿರುತ್ತದೆ. ಆಗ ಮಾತ್ರ ಅದು ಚೇತನದ ಚಿಲುಮೆಯಾಗಿರುತ್ತದೆ. ಅವನು ಹೃದಯಪೀಠವನ್ನು ಶೂನ್ಯಗೊಳಿಸುವಾಗ ಅದು ಅಸ್ಥಿ - ಮಾಂಸಗಳ ಮುದ್ದೆ ಆಗಿರುತ್ತದೆಂದು ಸಾರಿಸಾರಿ ಹೇಳುತ್ತಾರೆ. ಜೀವಿಯ ಅಜ್ಞಾನದ ಆಟವಾದರೂ ದೈವಲೀಲೆಯಿಂದ ಕೂಡಿದೆ ಎಂದು ನಂಬುವ ಅವರು ಮೃತ್ಯುಬಂದು ದೇಹವನ್ನು ಕಬಳಿಸುವ ಮುನ್ನ ಭಕ್ತಿಯಿಂದ ಭಗವಂತನ ನಾಮಸ್ಮರಣೆಯಲ್ಲಿ ಸದಾ ನಿರತವಾಗಿರಬೇಕೆಂದು ಕನಕದಾಸರು ಕಾವ್ಯದ ಉದ್ದಕ್ಕೂ ಹೇಳಿಕೊಂಡೆ ಹೋಗುತ್ತಾರೆ. ಈ ದೃಷ್ಟಿಯಿಂದ ಕನಕದಾಸರು ಈ ಕಾವ್ಯದ ದರ್ಶನದ ಜೀವಂತ ನಿದರ್ಶನವಾಗಿದ್ದಾರೆ.

ಕನಕದಾಸರು ಭಕ್ತಿಯ ದರ್ಶನವನ್ನು ಭಕ್ತಿ ಸಮೂಹಕ್ಕೆ ಈ ಕಾವ್ಯ ಗಂಗೆಯ ಮೂಲಕ ಮಾಡಿಸಿದ್ದಾರೆ. ಈ ಕೃತಿಯಾದ ಹರಿಭಕ್ತಿಸಾರ ಇದೊಂದು ಅಮೃತ ಜಲದ ಮಡುವಿನಂತೆ ಇದೆ. ಇದರಲ್ಲಿ ಮಿಂದು ಪುನೀತರಾಗವು ಪ್ರಜ್ಞೆ ಜನಸಮೂಹಕ್ಕೆ ಬಂದರೆ

ಕವಿಯ ಆಶಯ ಸಾರ್ಥಕವಾಗುತ್ತದೆ. ಹರಿಭಕ್ತಿಸಾರವು ಒಂದು ಬೆಳಕಿನ ಖನಿಯಾಗಿದೆ. ಲೋಕಪ್ರಬುದ್ಧರಾಗುವ ಸಂಕಲ್ಪದ ದೀಕ್ಷೆಯನ್ನು ಭಕ್ತಿ ಸಮೂಹ ಹೊಂದಿದೆ. ಕವಿಯ ಮನೋರಥ ಈಡೇರಿಕೆ ಆಗುತ್ತದೆ. ಒಟ್ಟಿನಲ್ಲಿ ಹರಿಭಕ್ತಿಸಾರ ಬಿದ್ದ ಬದುಕು ಸಾಗಿಸುವವರಿಗೆ, ಕ್ಲೇಶಕ್ಕೆ ತುತ್ತಾದವರಿಗೆ ಸಮರ್ಥ ಮಾರ್ಗದರ್ಶಿ ಕಾವ್ಯವಾಗುತ್ತದೆ. ನೊಂದ ಮನಕ್ಕೆ ಇಲ್ಲಿ ಶಾಂತಿ ದೊರೆಯುತ್ತದೆ. ದಿಕ್ಕುಕಾಣದರಿಗೆ ದಿಕ್ಸೂಚಿಯಾಗಿ ಈ ಕೃತಿ ನಿಲ್ಲುತ್ತದೆ.

ಭಗವಂತನ ಚರಿತ್ರೆಯನ್ನು ಕೀರ್ತಿಸಲು ಮಾನವ ಮಾತ್ರರಿಗೆ ಶಕ್ಯವಿಲ್ಲ ; ಆತನೇ ಕೃಪೆ ತೋರಿ, ಬುದ್ಧಿಯನ್ನು ಕರುಣಿಸಿದರೆ, ಅದರಿಂದ ಸಾಧ್ಯವಾದೀತು. ಆತ ಒಲಿಯದಿದ್ದರೆ ಏನನ್ನೂ ಮಾಡಲು ಸಾಧ್ಯವಿಲ್ಲ. ಆತನು ಒಲಿದರೆ ಅಲ್ಪವೂ ಕೂಡ ಮಹತ್ತಾಗುತ್ತದೆ. ಆತ ಪತಿಕರಿಸಿದರೆ, ಮನದ ಚಿಂತೆಯೇ ಅಲ್ಲ, ಹುಟ್ಟು - ಸಾವುಗಳನ್ನೂ ಗೆಲ್ಲಬಹುದು - ಇದು ಕನಕದಾಸರ ಸದೃಢವಾದ ವಿಶ್ವಾಸ.

ತನ್ನ ಮೆಚ್ಚಿನ ಆರಾಧ್ಯ ದೈವವಾದ ವಿಷ್ಣು ತನ್ನನ್ನು ಅನವರತವೂ ರಕ್ಷಿಸಲಿ ಎಂದು ಆರ್ತಭಾವದಲ್ಲಿ ಆತ ಪ್ರಾರ್ಥಿಸುತ್ತಾ ಹೋಗುತ್ತಾರೆ. ಪ್ರತಿ ಪದ್ಯದಲ್ಲಿಯೂ ಇಲ್ಲಿ ಕವಿ ಒಂದು ನಿಮಿತ್ತ ಅಷ್ಟೇ. ನಿಜವಾಗಿ ಇದು ಭಕ್ತರೆಲ್ಲರ ಹೃದಯದ ಮೊರೆಯೇ ಆಗಿರುವುದು ಕಂಡುಬರುತ್ತದೆ.

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಿಲು ಮತಿ
ಹೀನ ನಾನು ಮಹಾಮಹಿಮೆ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ (೪೯)

ಈ ತೆರನಾದ ಗೌರವಾದರಪೂಜ್ಯ ಅನನ್ಯ ಶರಣ್ಯ ಭಾವವೇ ಎಲ್ಲ ಕಡೆಯೂ ವ್ಯಾಪಕವಾಗಿದೆ. ತನ್ನ ಮನದ ಭಾವನೆಯನ್ನು ಅಕೃತವಾದ ಭಾಷೆಯಲ್ಲಿ ಸಮರ್ಥವಾಗಿ ಒಡಮೂಡಿಸಿರುವುದು ಕಂಡುಬರುತ್ತದೆ.

"ಹರಿಭಕ್ತಿಸಾರದಲ್ಲಿ ಭಕ್ತನ ಎದೆದುಂಬಿದ ಮೊರೆ ತಿಳಿಯಾದ ಸರಣಿಯಲ್ಲಿದೆ, ಛಂದಸ್ಸು ಪ್ರವಾಹಿಯಾಗಿದೆ, ತತ್ವ ನೀತಿಗಳ ಮಿಶ್ರಣವಿದ್ದರೂ, ಆತನ ಭಕ್ತಿಯ ಮತ್ತು ಶರಣವೃತ್ತಿಯ ರಸಾವೇಶವು ಅವಿರತವಾಗಿದ್ದು, ಭಕ್ತಿ ಪ್ರಕೃತಿಯ ಜನರ ಪಾರಾಯಣಕ್ಕೆ ಯೋಗ್ಯವಾಗಿದೆ." (ಕ.ಸಾ.ಚ ರಂ.ಶ್ರೀ ಮುಗಳಿ ೨೫೭)

ಈ ಮೇಲಿನ ಮಾತುಗಳಲ್ಲಿ ಕನಕದಾಸರ ಭಕ್ತಿ ಅಸಾಮಾನ್ಯವಾದದ್ದು, ಅಷ್ಟೆಯಲ್ಲ ಅದು ಅವರಲ್ಲಿ ಅವಿರತವೂ, ಅನುಕ್ಷಣವೂ, ಬಿಡಲಾರದ, ಅನನ್ಯವಾದ ಸಂಬಂಧ. ಅಂದರೆ, ಭಕ್ತ- ಭಗವಂತನ ನಡುವಿನ ಅವಿನಾಭಾವ ಸಂಬಂಧ ಎನ್ನುವುದನ್ನು ಕಾಣಬಹುದು. ಹೆಸರೆ ಸೂಚಿಸುವಂತೆ ಹರಿನಾಮ ಸಂಕೀರ್ತನೆಯ ತುಳಸೀಹಾರ! ವಿಷ್ಣು ಪಾರಂಪರ್ಯದ ಪುಣ್ಯ ಕೃತಿ! ಭಕ್ತಿಯೇ ಭಾಗೀರತಿಯಾಗಿ ಕನ್ನಡಕ್ಕೊದಗಿಬಂದ ತೀರ್ಥಸಾಹಿತ್ಯ! ಜಗನ್ನಾಟಕ ಸೂತ್ರಧಾರಿಯಾದ ಶ್ರೀಹರಿಯ ದಶಾವತಾರಗಳ ನೆನಹಿನಲ್ಲಿ ಬಂದೊದಗಿದ ಪ್ರಾಂಜಲಮನದ ಪರಿಶುದ್ಧ ಭಾವನೆಯ ಭಕ್ತಿ ಪ್ರವಾಹೋಪಾದಿಯಲ್ಲಿ ಹರಿಯುವುದನ್ನು ಕಾಣಬಹುದಾಗಿದೆ.

ಗತಿವಿಹೀನರಿಗಾರು ನೀನೇ
ಗತಿಕಣಾ ಪತಿಕರಿಸಿಕೊಂಡು ಸ
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ
ಶೃತಿ ವಚನ ವಾಡುವುದು ಶರಣಾ
ಗತರ ಸೇವಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ (೫೪)

'ಇಲ್ಲಿ ಅಭಿವ್ಯಕ್ತವಾಗುವ ಭಕ್ತನ ಭಕ್ತಿಯು ಆರ್ತತೆ, ಅನನ್ಯ ಶರಣತೆ ಮತ್ತು ನೇಷ್ಟಿಕ ಭಕ್ತಿಯ ಅನುಮೋದನೆ ನಿಜಕ್ಕೂ ಶ್ಲಾಘನೀಯ. ಪ್ರತಿ ಪದ್ಯಗಳಲ್ಲೂ ಕೂಡ ಭಕ್ತಿರಸ ತುಂಬಿ ಹರಿಯುತ್ತಾ (ಮೈದುಂಬಿ ಹರಿಯುವ ನದಿಯಂತೆ) ಮುಂದೆ ಸಾಗುತ್ತದೆ. ಅಷ್ಟೇ ಅಲ್ಲದೆ ಪ್ರಾಸಾನುಪ್ರಾಸಯುಕ್ತ ನಾದಲೋಲಪತೆಯಲ್ಲಿ ಪ್ರತಿ ಪದ್ಯದಲ್ಲೂ ಅಭಿವ್ಯಕ್ತವಾಗುವ ಭಕ್ತಿಸ್ಪಷ್ಟತೆಯಲ್ಲಿ ಅದಕ್ಕನುಗುಣವಾದ ಶೈಲಿಯ ಸೊಬಗು ಸೌಂದರ್ಯದಲ್ಲಿ, ಭಾವ ಮಾಧುರ್ಯದಲ್ಲಿ, ಭಾಷೆಯ ಬಂಧುರತೆಯಲ್ಲಿ ಕಮನೀಯ ಕಾವ್ಯಗುಣ ವಿಶೇಷವಾದದ್ದು.'

ಕೃತಿಯಲ್ಲಿ ಅರ್ಧ ಭಾಗದಲ್ಲಿ ಹರಿಯ ಸರ್ವಶಕ್ತಿ ಮತ್ತು ಸರ್ವಜ್ಞತ್ವದ ವರ್ಣನೆಯಿದ್ದರೆ, ಉಳಿದರ್ಧ ಭಾಗದಲ್ಲಿ ಮಾನವನ ಅಲ್ಪತ್ವ ಮತ್ತು ಅವನಿಗೆ ಅವಶ್ಯವಿದ್ದ ದೇವರ ಕರುಣೆ, ಆಶೀರ್ವಾದ ಮತ್ತು ರಕ್ಷಣೆಗಳ ಕುರಿತಾದ ಚಿತ್ರಣವಿದೆ. ತಾಯಿಯ

ಗರ್ಭದಲ್ಲಿ ರಕ್ತ ಮಾಂಸ ಮಜ್ಜೆಗಳ ಮಧ್ಯೆದಲ್ಲಿ ಜನ್ಮತಾಳುವ ಮಾನವನ ಬಗೆಗೆ ಕಾಳಜಿ ವಹಿಸುವವರು ದೇವರಲ್ಲದೆ ಮತ್ತಾರೂ ಅಲ್ಲ. ಅಸಂಖ್ಯಾತ ಜನ್ಮಗಳನ್ನು ದಾಟಿ, ಮಾನವ ಜನ್ಮವನ್ನು ಪಡೆದ ಮನುಷ್ಯನು ಈ ಭವಚಕ್ರದಿಂದ ಪಾರಾಗಲು ದೇವನ ಮೇಲೆ ತನ್ನ ಧ್ಯಾನವನ್ನು ಕೇಂದ್ರೀಕರಿಸಬೇಕು. ದೇವರ ಕರುಣೆಯಿಲ್ಲದೆ, ಆತ ಮುಕ್ತಿಯೆಂಬ ಕನ್ಯೆಯನ್ನು ಪಡೆಯಲಾರ. ದಾಸರು ಇಂದು ಬ್ರಹ್ಮಾಂಡ ವಿಜ್ಞಾನ (Cosmology) ಮತ್ತು ಯೋಗ ಶಾಸ್ತ್ರಗಳ ಪಾಠವನ್ನೇ ಕಾವ್ಯರೂಪದಲ್ಲಿ ಅಭಿವ್ಯಕ್ತಿಸಿದ್ದಾರೆ. ಅವರ ಪ್ರಕಾರ ಜೀವಾತ್ಮನು ಪಂಚಭೂತಗಳು ಮತ್ತು ೨೫ ತತ್ವಗಳಿಂದ ರಚಿತನಾಗಿದ್ದಾನೆ. ಎಂಟು ಗೇಣುದ್ದದಷ್ಟಿರುವ ಮಾನವನ ದೇಹದಲ್ಲಿ ಎಂಟು ಕೋಟಿ ಕೂದಲುಗಳು, ಅರವತ್ತೆಂಟು ಸಂದುಗಳಿದ್ದು, ಅದೊಂದು ಮಾಂಸದ ಮುದ್ದೆಯಾಗಿದೆ. ಈ ದೇಹವೆಂಬ ಮನೆಯಲ್ಲಿ ದೇವರಿರುವ ತನಕ ಅದಕ್ಕೆ ಗೌರವವುಂಟು. ಅದರೊಳಗಿನ ಆತ್ಮವು ಅದನ್ನು ಬಿಟ್ಟುಹೋದ ಕೂಡಲೇ ಅದನ್ನು ಮಣ್ಣಿನಲ್ಲಿ ಹೂಳಬೇಕಾಗುತ್ತದೆ. ಜೀವಾತ್ಮನನ್ನು ಕಾಮ, ಕ್ರೋಧ, ಮೋಹ, ಮದ, ಮತ್ಸರ ಮತ್ತು ಅಹಂಕಾರಗಳೆಂಬ ಆರು ವೈರಿಗಳು ಕಾಡುತ್ತವೆ. ಅಂತಹ ಸಂಧಿಗ್ಧ ಪರಿಸ್ಥಿತಿಗಳಲ್ಲಿ ಜೀವಾತ್ಮನನ್ನು ಕಾಪಾಡುವುದು ದೇವನೊಬ್ಬನೇ. ದೇವರು ಸೃಷ್ಟಿ - ಸ್ಥಿತಿ - ಲಯಗಳನ್ನು ನಿರ್ವಹಿಸುವುದಕ್ಕಾಗಿ ಬ್ರಹ್ಮ, ವಿಷ್ಣು, ರುದ್ರರೆಂಬ ರಕ್ಷಕರನ್ನು ನಿಯಮಿಸಿ, ಸಾತ್ವಿಕ ರಾಜಾಸಿಕ, ತಾಮಾಸಿಕ ರೂಪಗಳಲ್ಲಿ ಅಭಿವ್ಯಕ್ತನಾಗುತ್ತಾನೆ. ಮಾನವ ಜೀವನದ ನಶ್ವರತೆಯ ಬಗೆಗೆ ತೀವ್ರವಾದ ಅರಿವಿದ್ದ ಕನಕದಾಸರು ಅದನ್ನೊಂದು 'ಗಾಳಿಯಲ್ಲಿದ್ದ ದೀಪಕ್ಕೆ ಹೋಲಿಸುತ್ತಾರೆ. ದೀಪವಾರುವ ಮೊದಲೇ ಅದನ್ನು ನಾವು ದಿವ್ಯತ್ವಕ್ಕೇರಿಸಬೇಕು' ಈ ರೀತಿಯಾಗಿ ಕನಕದಾಸರು ಹರಿಭಕ್ತಿಸಾರದಲ್ಲಿ ಮಾನವ ಮತ್ತು ದೇವರ ನಡುವಿನ ಸಂಬಂಧವನ್ನು ಮಧುರತರವಾಗಿರಬೇಕೆಂದು ಪ್ರತಿಪಾದಿಸುವ ಭಕ್ತಿಕಾವ್ಯವಾಗಿದೆ. ಕಾವ್ಯದಲ್ಲಿ ಕನಕದಾಸರು, ಹಿಂದೂ ಪುರಾಣಗಳು, ತತ್ವಜ್ಞಾನ ಮತ್ತು ಯೋಗ ಮುಂತಾದ ವಿಷಯಗಳ ಬಗ್ಗೆ ತಮಗಿದ್ದ ಅಪಾರವಾದ ಜ್ಞಾನವನ್ನು ಸಂಗ್ರಹ ರೂಪದಲ್ಲಿ ಅದನ್ನು ಹರಿಭಕ್ತಿಸಾರದಲ್ಲಿ ಸೆರೆಹಿಡಿದಿದ್ದಾರೆ.

"ಹೀಗೆ ಕನ್ನಡಿಗರ ಜೀವನದಲ್ಲಿ ಜೀವಧಾತುವೆಂಬಂತೆ ಸೇರಿಕೊಂಡಿರುವ ಕವಿ ಚಿರಂತನ ಶಕ್ತಿಯ ಪ್ರತಿಮಾರೂಪವೆಂದೇ ಹೇಳಬಹುದು. ಕನಕದಾಸರ ನಡತೆಯೆಂತು ನೇರವೊ ನುಡಿಯ ಅಷ್ಟೇ ನೇರ. ಆದ್ದರಿಂದ ಅವರ ಶೈಲಿ ನಿರಾಭರಣಸುಂದರವಾಗುತ್ತದೆ. ಸಾಮಾನ್ಯ ಜನತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಆ ಕವಿಯ ಗಹನಾತಿಗಹನ ಚಿದ್ವ್ಯಾಪಾರಗಳ ಸಂವಹನಕ್ಕೆ ಆ ಶೈಲಿ ಅನಿವಾರ್ಯವಾಗಿದೆ". 'ಭೌತಿಕವಾಗಿ ಕವಿ ಸಾಯುತ್ತಾನೆ ; ನಿಜಕವಿ ಸಾಯುವುದಿಲ್ಲ ; ತನ್ನ ಕೃತಿಗಳ ಮೂಲಕ ಅವನು ಬದುಕಿರುತ್ತಾನೆ ; ಯಾವ ಕವಿ ಕಂತೆಯನ್ನೊಗೆದನಂತರವೂ ಜನಮನದಲ್ಲಿ ನಿತ್ಯನೂತನವಾಗಿ ದೇದಿಪ್ಯಮಾನನಾಗಿ ರಾರಾಜಿಸುತ್ತಾನೆಯೋ ಯಾವ ಕವಿಯ ಕೃತಿಯು ಶತಶತಮಾನಗಳ ತನಕ ಜನತೆಯ

ಬದುಕಿಗೆ, ಬೆಳಕಾಗಿ, ಜೀವಸತ್ವವಾಗಿ, ಕಾಮಧೇನುವಾಗಿ ಉಳಿಯುತ್ತದೆಯೋ ಅವನೆ ಅಮರ ಕವಿ'. (ಕ.ದ. ೨೨-೨೩)

ಈ ಎಲ್ಲಾ ಅಂಶಗಳಿಂದಲೂ ನಾವು ಗಮನಿಸಬಹುದಾದ್ದು ಎಂದರೆ, ಕನಕದಾಸರು ಸಾಮಾನ್ಯರಲ್ಲಿ ಸಾಮಾನ್ಯರಾದ ಅಸಾಮಾನ್ಯ ವ್ಯಕ್ತಿತ್ವದ ಮಹಾವ್ಯಕ್ತಿಯಾಗಿ, ಸಂತನಾಗಿ, ದಾರ್ಶನಿಕನಾಗಿ, ಉನ್ನತ ಸ್ಥಾನದಲ್ಲಿ ನಿಲ್ಲುತ್ತಾರೆ. ಇದಕ್ಕೆ ಅವರು ನೀಡಿರುವ ಸಾಹಿತ್ಯ ಕೃತಿಗಳಷ್ಟೇಯಲ್ಲ, ಇನ್ನೂ ಅವರ ಬಗೆಗಿನ ಪವಾಡಸದೃಶ್ಯ ಘಟನೆಗಳು ಜನಮನದಲ್ಲಿ ಇರುವವರೆಗೂ ಅವರ ನಾಮಧೇಯ ಮಾಸುವುದಿಲ್ಲ. ಅವರ ಬಗೆಗೆ ರಂ.ಶ್ರೀ. ಮುಗಳಿ ಅವರ ಅಭಿಪ್ರಾಯ ಹೀಗಿದೆ. "ಪುರಂದರ ದಾಸರಿಗೆ ಸಮತೂಕದವನು ಸ್ವತಂತ್ರ ಕಾಂತಿಯುಳ್ಳವನೂ ಆಗಿ ಕನಕದಾಸನು ಅದೇ ಕಾಲದಲ್ಲಿ ಜೀವಿಸಿದ್ದನು." ಅಂದರೆ, ಕೀರ್ತನ ಸಾಗರದಲ್ಲಿ ಈ ಇಬ್ಬರೂ ಈಜಿದವರೇ 'ಆದರೆ, ಪುರಂದರ ದಾಸರಿಗಿಂತ ಕನಕರು ಒಂದು ಕೈ ಮೇಲಾಗಿ ಕಾಣುತ್ತಾರೆ. ಏಕೆಂದರೆ, ಅವರು ಸಾಮಾಜಿಕ ಸಮಸ್ಯೆಗಳನ್ನು, ಪುರಾಣ, ಭಾಗವತ ಘಟನೆಗಳನ್ನು ಸೇರಿಸಿ, ಜನಮಾನಸದಲ್ಲಿ ಅಚ್ಚಳಿಯುವಂತ ಕೃತಿ ರತ್ನಗಳನ್ನು ಈ ಜಗತ್ತಿಗೆ ನೀಡಿದ್ದಾನೆ'. ಆದ್ದರಿಂದ ಪುರಂದರದಾಸರಿಗಿಂತ ಇವರೊಂದು ಕೈ ತೂಕ ಜಾಸ್ತಿಯಾಗಿಯೇ ಕಂಡು ಬರುತ್ತಾರೆ. ಕನಕರು ಮೊದಲಿಗೆ ಕಲಿಯಾಗಿ, ಕವಿಯಾಗುತ್ತಾ, ದಾಸರಾಗಿ, ಆಧ್ಯಾತ್ಮಿಕ ಶಿಖರನ್ನೇರಿ, ಮಹಾತ್ಮರಾಗುತ್ತಾರೆ. ಅವರು ಇತರ ದಾಸರಿಗೆಲ್ಲರಿಗಿಂತಲೂ ಕೂಡ ನಿಲುಕದ ಮಹಾವ್ಯಕ್ತಿಯಾಗುತ್ತಾರೆ. ಇದು ಅವರ ವ್ಯಕ್ತಿತ್ವಕ್ಕೆ, ಅವರ ಸಾಧನೆಯ ಬದುಕಿಗೆ, ಅವರ ಕಾಲಘಟ್ಟವೇ ನೀಡಿದ ನಿರ್ಧರಿಸಿದ ಮಹಾಸಾಕ್ಷ್ಯವಾಗಿದೆ. ಇಲ್ಲಿ ಕನಕರು ಮಹಾತ್ಮರಾಗುತ್ತಾರೆ.

—

**೩. ಶ್ರೀ ರಾಮಧಾನ್ಯ ಚರಿತೆ :** ಈ ಕೃತಿ ಹೇಳುವಂತೆ ರಾಮಾಯಣ ಕತೆಯನ್ನು ಒಳಗೊಂಡದ್ದು, ಅದರಲ್ಲಿ ಧಾನ್ಯಗಳು ಪಾತ್ರಗಳಾಗಿ ಚಿತ್ರಿತವಾಗಿವೆ. ಕನಕದಾಸರು ತಮ್ಮ ಆತ್ಮಚರಿತ್ರೆಯಂತೆ ಈ ಕಾವ್ಯ ಸೃಷ್ಟಿಸಿದ್ದಾರೆ. ಅದು ಅಂದಿನ ಸಾಮಾಜಿಕ ಸಮಸ್ಯೆಯ ವರ್ಗ ಹೋರಾಟದ ಧ್ವನಿಯಾಗಿಯೂ ಕೂಡ ಈ ಕೃತಿ ಕಂಡುಬರುತ್ತದೆ. ಕಾವ್ಯದಲ್ಲಿ ಏನೆಲ್ಲಾ ಇದ್ದರೂ ಮುಖ್ಯವಾದದ್ದು, ವ್ರೀಹಿ ಮತ್ತು ನರೆದಲೆಗರಿಗೆ ನಡೆದ ವಾಗ್ವಾದ ಮತ್ತು ಆ ವಾಗ್ವಾದ ತೀರ್ಮಾನ ಇಷ್ಟೇ ಕಥೆಯ ಮುಖ್ಯ ಕಥಾಂಶ.

ಶ್ರೀ ರಾಮಚಂದ್ರ ವನವಾಸದ ನಂತರ ರಾವಣ ಸಂಹಾರ ಮಾಡಿ, ಅಯೋಧ್ಯಾಭಿಮುಖವಾಗಿ ಪ್ರಯಾಣ ಮಾಡುತ್ತಿರಲು, ಆಗ ಮಾರ್ಗಮಧ್ಯದಲ್ಲಿ ವಾಲ್ಮೀಕಿ ಆಶ್ರಮಕ್ಕೆ ಆಶೀರ್ವದಾರ್ಥಿಯಾಗಿ ರಾಮನು ಸೀತ-ಲಕ್ಷ್ಮಣರೊಡನೆ ಬರುತ್ತಾನೆ. ರಾಮ ಬರುವ ವಾರ್ತೆಯನ್ನು ತಿಳಿದು, ಮುನಿಶ್ರೇಷ್ಠರೆಲ್ಲರೂ ಅಲ್ಲಿ ಒಂದುಗೂಡುತ್ತಾರೆ. ಶ್ರೀ ರಾಮಚಂದ್ರನ ಮುಖದರ್ಶನ ಮಾಡುವುದು ಮುನಿಶ್ರೇಷ್ಠರದ್ದಾಗಿದ್ದರೆ, ಅವರೆಲ್ಲರಿಂದಲೂ ಏಕಕಾಲದಲ್ಲಿ ಆಶೀರ್ವದಿತನಾಗುವುದು ಶ್ರೀ ರಾಮನದಾಗುತ್ತದೆ. ಈ ಸಮಯದಲ್ಲಿ ಉಪಚಾರಕ್ಕಾಗಿ ಬಳಸಿದ ಎಲ್ಲ ರೀತಿಯ ಭಕ್ಷ್ಯ ಪದಾರ್ಥಗಳನ್ನು ಶ್ರೀ ರಾಮನ ಜೊತೆಯಲ್ಲಿದ್ದವರು ಸವಿದು ಕುಣಿದಾಡಿದರು. ಹನುಮಂತನನ್ನು ಕುರಿತು, ಊಟೋಪಚಾರದ ಬಗೆಗೆ ಶ್ರೀರಾಮನು ಕೇಳಲು ಆತನು ಬಳಸಿದ ವಸ್ತುಗಳನ್ನು ನೋಡಿದ ನಂತರವೇ ಹೇಳಲುಸಾಧ್ಯ ಎಂದಾಗ ಮುನಿಶಿಷ್ಯರೆಲ್ಲರೂ ಔತಣಕ್ಕೆ ಬಳಸಿದ ಧಾನ್ಯಪದಾರ್ಥಗಳನ್ನು ತಂದು ಶ್ರೀರಾಮನ ಮುಂದೆ ಸಾಲಾಗಿ ಇರಿಸಿದರು. ಆಗ ಧಾನ್ಯಗಳನ್ನು ಕುರಿತು ಎಲ್ಲರ ಮುಖ ನೋಡುತ್ತಾ, ಈ ಧಾನ್ಯಗಳಲ್ಲಿ ಶ್ರೇಷ್ಠವಾದುದೊಂದನ್ನೇ ಹೇಳಿರಿ ಎನ್ನಲು ಮುನಿಗಳು ಒಬ್ಬೊಬ್ಬರೇ ಒಂದೊಂದನ್ನು ಕುರಿತು ಹೇಳಿದಾಗ ಶ್ರೀ ರಾಮನೆ ಮುಂದಾಗಿ ಮುಖ್ಯವಾದುದೊಂದನ್ನೆ ಹೇಳಿ ಎನ್ನಲು ಆಗ ಗೌತಮ ಮುನಿ' 'ನರೆದಲೆಗ'ನೇ ನಮ್ಮೆಯ ದೇಶಕ್ಕೆ ವಾಸಿಟ ಎಂಬ ಮಾತನ್ನು ಹೇಳಿದಾಗ ಅಲ್ಲಿಯೇ ಇದ್ದ ವ್ರೀಹಿ (ಭತ್ತ)ಯು ನರೆದಲೆಗ(ರಾಗಿ)ನ ಮೇಲೆ ವಾಗ್ದಾಳಿ ನಡೆಸಿ, ತಾನೇ ಶ್ರೇಷ್ಠ ಎಂಬಂತೆ ಸಾಕ್ಷೀಕರಿಸಿಕೊಂಡಿತು. ಅಷ್ಟೇ ಅಲ್ಲದೆ, ನರೆದಲೆಗನನ್ನು ತುಚ್ಛವಾಗಿ ಕಂಡು ಹೀಯಾಳಿಸಿತು. ಈ ಎಲ್ಲವನ್ನೂ ಪ್ರಶಾಂತವಾಗಿಯೇ ನೋಡಿದ ನರೆದಲೆಗ(ರಾಗಿಯು)ನು 'ನುಡಿಯ ಕೇಳುತ್ತಾ ಕನಲಿಕಂಗಳು ಕಿಡಿಮಸಗಿ ಖತಿಗೊಂಡು ನುಡಿದನು......' ಈ ನರೆದಲೆಗನ ಮಾತನ್ನು ಕೇಳಿ ಸಭೆ ಮೌನ ತಾಳಿತು. ಜೊತೆಗೆ ವ್ರೀಹಿಯೂ ಕೂಡ ಧೈರ್ಯಗುಂದಿತು. 'ಈ ನಪುಂಸಕನಲ್ಲಿ ನಿರಂತರವೇನು ಕಾರಣವಾದವಿದು, ನಮಗೇನು ಬುದ್ಧಿಯನರುಪಿರಿ ಪೇಳೆಂದ ನರೆದಲೆಗ',

ಈ ಮಾತಿನ ಮೂಲಕ ಸಭೆಯನ್ನೆ ಪ್ರಶ್ನಿಸುವ ನೈತಕ ಧೈರ್ಯವನ್ನು ಪ್ರದರ್ಶಿಸುತ್ತದೆ. ಈ ವಾದ ವಿವಾದಗಳನ್ನು ಕಂಡು ಶ್ರೀ ರಾಮನು ಇವರೀರ್ವರನ್ನೂ ಆರು ತಿಂಗಳು ಸೆರೆಯಲ್ಲಿಡಿ, ವಿಚಾರ ಮಾಡೋಣ ಎಂದು ಹೇಳಿ ಅಯೋಧ್ಯಾ ಮುಖ ಮಾಡಿದ.

ಶ್ರೀ ರಾಮ ಪಟ್ಟಾಭಿಷೇಕನಾದ ನಂತರ ವ್ರೀಹಿ ಮತ್ತು ನರೆದಲೆಗರ ನೆನಪಾಗಿ ಅವರೀರ್ವರನ್ನು ಸಭೆಗೆ ಕರೆತರಲು ಹನುಮಂತನಿಗೆ ಹೇಳಿದನು. ಇಲ್ಲಿಗೆ ಏಳು ತಿಂಗಳೂ ಕಳೆದುಹೋಗಿದ್ದವು. ಹನುಮಂತನು ಈ ಇಬ್ಬರ ಜೊತೆಗೆ ಮುನಿಶ್ರೇಷ್ಠರನ್ನು ಕೂಡಿಕೊಂಡು ಶ್ರೀರಾಮನ ಆಸ್ಥಾನಕ್ಕೆ ಬರಲು ಅಲ್ಲಿ ದೇವಾನುದೇವತೆಗಳೆಲ್ಲರೂ, ರಾಜಮಹಾರಾಜರೂ, ಮುನಿಶ್ರೇಷ್ಠರೂ ಚತುವರ್ಣೀಯರೂ ಆದ ಸಾಮಾಜಿಕರೆಲ್ಲ ಸಭೆಯಲ್ಲಿ ಆಸೀನರಾಗಿದ್ದರು. ಸಭೆಯನ್ನೆಲ್ಲ ಗಮನಿಸಿದ ನರೆದಲೆಗ ಎಲ್ಲರಿಗೂ ಕೈ ಮುಗಿದು ...... "ಕರಗಳ ಮುಗಿದು, ಧರಣೀಕಾಂತ ರಘುವರನೀ ಸುಬದ್ಧಿಯನೆಂತೂ ನಮಗರುಹುವಿರಿಯದ ಪೇಳೆಂದ ನರೆದಲೆಗ". ಈ ಸಮಯದಲ್ಲಿ ನಿತ್ರಾಣನಾಗಿ, ತಲೆಬಾಗಿ ವ್ರೀಹಿ ನಿಂತಿರುವುದನ್ನು ಕಾಣಬಹುದು. ಈ ಇಬ್ಬರ ವಾದ ವಿವಾದಗಳ ಬಗೆಗೆ ತಿಳಿಸಿ, ಅವರಿಗೆ ತೀರ್ಮಾನ ನೀಡಲು ಸಭೆಯಲ್ಲಿ ಇಂದ್ರನಿಗೆ ಹೇಳಲು ಇಂದ್ರನು "...... ಸಾರಹೃದಯನು ನರೆದಲೆಗ ನಿಸ್ಸಾರನೀ ವ್ರೀಹಿಯೆನ್ನಲು....... " ಈ ಮಾತನ್ನು ಮುನಿಶ್ರೇಷ್ಠ ನಾರದಾದಿ ಮುನಿಶ್ರೇಷ್ಠರೂ, ದೇವಾದಿದೇವತೆಗಳೂ, ಬ್ರಾಹ್ಮಣಶ್ರೇಷ್ಠರೂ, ಸಭಿಕರೆಲ್ಲರೂ ಈ ನರೆದಲೆಗನನ್ನು ಕೊಂಡಾಡಿದರು. ತಮ್ಮ ತಮ್ಮ ಶಕ್ತಿಗನುಸಾರವಾಗಿ ನರೆದಲೆಗನಿಗೆ ವರಕೊಟ್ಟು ಭೂಲೋಕದಲ್ಲಿ ಪ್ರಖ್ಯಾತನಾಗು ಎಂದು ಹರನಾದಿಯಾಗಿ ಎಲ್ಲರೂ ಆಶೀರ್ವದಿಸಿದರು. ಈ ಸಮಯದಲ್ಲಿ ಸಭೆಯ ಒಂದು ಮೂಲೆಯಲ್ಲಿ ನಿತ್ರಾಣನಾದ ವ್ರೀಹಿ ತಲೆಬಾಗಿರುವುದನ್ನು ಕಂಡು ಮೊದಲು ನರೆದಲೆಗನೆ ವ್ರೀಹಿಗೆ ಸಾಂತ್ವಾನ ನೀಡುವುದು ಆತನ ಮನೋವೈಶಾಲ್ಯಕ್ಕೆ ಕನ್ನಡಿಯಾಗಿದೆ. ಶ್ರೀರಾಮನು ವ್ರೀಹಿಯ ಬಳಿ ಹೋಗಿ "ದೀನರಲಿ ದಾರಿದ್ರ ಜನದಲ್ಲಿ ನೀನು ನಿರ್ಧಯನೆಂದೆವಲ್ಲದೆ, ಹೀನಗಳೆದವರಲ್ಲ ......" ಇತ್ಯಾದಿ ಮಾತುಗಳ ಮೂಲಕ ಸಮಾಧಾನಪಡಿಸಿ, ಇಬ್ಬರೂ ಭೂಲೋಕವನ್ನು ಆಳಿರೆಂದು ಕಳುಹಿಸುತ್ತಾನೆ.

ಈ ಕಥೆ ಇಷ್ಟಕ್ಕೇ ಉಳಿದಿದ್ದರೆ, ಕಾವ್ಯಕ್ಕೆ ಮತ್ತು ಕವಿಗೆ ಅಷ್ಟೊಂದು ಪ್ರಾಮುಖ್ಯತೆ ಬರುತ್ತಿರಲಿಲ್ಲ. ಏಕೆಂದರೆ, ಮೊದಲೆ ಹೇಳಿದಂತೆ ಇದು ಒಂದು ರೀತಿಯಲ್ಲಿ ಕನಕದಾಸರ ಆತ್ಮ ಚರಿತ್ರೆಯಾಗಿಯೂ, ಶೋಷಿತ ಜನಸಮೂಹದ ಪ್ರತಿಭಟನೆಯ ಧ್ವನಿಯಾಗಿ, ಅಲ್ಲದೇ ಕನಕದಾಸರು ಬದುಕಿದ ಕಾಲಮಾನದಲ್ಲಿ ಇದ್ದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಜನಜೀವನವನ್ನು ಈ ಕೃತಿಯ ಮೂಲಕ ಓದುಗರಿಗೆ ಮುಟ್ಟಿಸಲು ಮತ್ತು ಕಾವ್ಯದ ಬಗೆಗೆ ಪ್ರಸ್ತುತದಲ್ಲಿ ವಿದ್ವಾಂಸರು ತಮ್ಮದೇಯಾದ ಆಲೋಚನೆಯನ್ನು ಮಾಡಲು, ಅವಕಾಶವನ್ನು ಕಲ್ಪಿಸಿಕೊಟ್ಟಿದ್ದು, ಕನ್ನಡ ಸಾಹಿತ್ಯದ ಹರಿದಾಸ ಪರಂಪರೆ. ಅದರಲ್ಲಿಯೂ ಮುಖ್ಯವಾಗಿ

ಕನಕದಾಸರು ಈ ಅಂಶಗಳನ್ನು ತಮ್ಮ ಕೃತಿಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ೧೫-೧೬ನೇ ಶತಮಾನದಲ್ಲಿ ಅತಿಶ್ರೇಷ್ಠವಾಗಿ ಅತ್ಯುನ್ನತವಾಗಿ ಬಾಳಿ ಬದುಕಿದ ವಿಜಯನಗರ ಸಾಮ್ರಾಜ್ಯದಲ್ಲಿಯೇ ಸಾಮಾನ್ಯ ಜನಕ್ಕೆ ಮೇಲ್ವರ್ಗದವರಿಂದ ನಿರಂತರವಾಗಿ ಎಲ್ಲ ಹಂತದಲ್ಲಿಯೂ ಕೂಡ ಶೋಷಿಸಲ್ಪಡುತ್ತಿದ್ದರು. ಅಂದು ಇನ್ನೂ ಆಧುನಿಕ ಯುಗವಾಗದ ಕಾರಣ ಎಲ್ಲರಿಗೂ ಶಿಕ್ಷಣವಿರಲಿಲ್ಲ. ಶಿಕ್ಷಣ ಪಡೆದ ವರ್ಗ ಶಿಕ್ಷಣವಿಲ್ಲದ ಸಾಮಾನ್ಯ ವರ್ಗದವರನ್ನು ತಮ್ಮ ಕೈಗೊಂಬೆಯಂತೆ ಮಾಡಿಕೊಂಡು ಅಂಧಾನುಕರಣೆಯಿಂದ ನಡೆಸಿಕೊಳ್ಳುತ್ತಿತ್ತು. ಈ ಮಾತಿಗೆ ಕನಕದಾಸರೇ ಪ್ರತ್ಯಕ್ಷವಾಗಿ ಉದಾಹರಣೆ. ಇದರಿಂದ ಕೆಳವರ್ಗದಲ್ಲಿ ಹುಟ್ಟಿ ಮಹಾಜ್ಞಾನಿ ಮೇಧಾವಿಯಾದ ಕನಕದಾಸರಿಗೆ ಇದು ಸರಿಯಾಗಿ ಕಂಡುಬರುವುದಿಲ್ಲ. ಅವರೇ ಒಮ್ಮೆ ಉಡುಪಿಯ ಶ್ರೀಕೃಷ್ಣಮಂದಿರದಲ್ಲಿ ದರ್ಶನ ಪಡೆಯಲು ಹೋದಾಗ ಉಡುಪಿಯಲ್ಲಿನ ಬ್ರಾಹ್ಮಣ ವರ್ಗ ಅವರನ್ನು ಹೇಗೆ ನಡೆಸಿಕೊಂಡಿದೆ ಎಂಬುದು ಅದರ ಪರಿಣಾಮ **'ಕನಕನ ಕಿಂಡಿ'** ಇತಿಹಾಸ ಪ್ರಸಿದ್ಧಿಗೆ ಬರುವುದನ್ನು ಕಂಡಾಗ ಅಂತಹ ಸತ್ಯ ಸಾಮಾನ್ಯ ಮನುಷ್ಯನ ಮನದಲ್ಲಿ ಅಚ್ಚ ಹಸುರಾಗಿದೆ.

ಭಗವಂತನೇ ಅಂತಹ ಭಕ್ತನೆಡೆಗೆ ಗೋಡೆಯಲ್ಲಿ ಕಿಂಡಿ ಮಾಡಿಕೊಂಡು ದರ್ಶನ ನೀಡುವ ಪ್ರಸಂಗ ನಿಜಕ್ಕೂ ಭಕ್ತ - ಭಗವಂತರ ಅನನ್ಯತೆಯ ಪ್ರೇಮವನ್ನು ನಾವು ಕಾಣಬಹುದು. ಹರಿದಾಸ ಪರಂಪರೆಯಲ್ಲಿ ಕೆಳವರ್ಗದವನಾದ ಈ ಕನಕದಾಸರಿಗೆ ಅವರ ಎಲ್ಲಾ ಆಚಾರ ವಿಚಾರಗಳಲ್ಲಿ ಭಾಗಿಯಾಗುವ ಅವಕಾಶ ಸಿಗದಿರುವುದು ಆ ಸಮಯದಲ್ಲಿ ವ್ಯಾಸತೀರ್ಥರಿಗೆ ಕನಕರ ಅಮೋಘ ಶಕ್ತಿಯುತ ಭಕ್ತಿ ಗೋಚರಿಸುತ್ತದೆ. ಆದ್ದರಿಂದಲೇ ವ್ಯಾಸತೀರ್ಥರು ಕನಕ ಕೆಳವರ್ಗದ ವ್ಯಕ್ತಿಯಾದರೂ ಆತನನ್ನು ಅತಿಯಾದ ಗೌರವಾದರದಿಂದ ಕಾಣುತ್ತಾರೆ. ಆದರೆ, ಅವರ ಜೊತೆಯಲ್ಲಿದ್ದ ಇತರ ಬ್ರಾಹ್ಮಣರು ಕನಕರನ್ನು ತುಂಬಾ ತುಚ್ಛವಾಗಿ ಕಾಣುತ್ತಾರೆ. ಇದಕ್ಕೆ ಅವರ "ಕೋಣಮಂತ್ರ, ಬಾಳೆ ಹಣ್ಣಿನ ಪ್ರಸಂಗ, ನಾನು ಹೋದರೆ ಹೋಗಬಹುದು, ಕೈಯಲ್ಲಿಯ ಆದಿಕೇಶವನ ವಿಗ್ರಹ ಪ್ರಸಂಗ, " ಈ ಪ್ರಸಂಗಗಳು ಈ ಬ್ರಾಹ್ಮಣರಿಗಿಂತ ಅತ್ಯುನ್ನತ ಸ್ಥಾನ ಕಲ್ಪಿಸಿಕೊಡುವಲ್ಲಿ ಹಾಗೂ ಕನಕದಾಸರನ್ನು ಒಬ್ಬ ಮಹಾಜ್ಞಾನಿ, ಪವಾಡಪುರುಷನನ್ನಾಗಿ ನಿರ್ಮಿಸುವಲ್ಲಿ ಈ ಅಂಶಗಳು ಮುಖ್ಯವಾದವುಗಳು. ಜೊತೆಗೆ ಜನಸಾಮಾನ್ಯರ ಮನದಲ್ಲಿ ದೈವತ್ವದ ಭಾವನೆಯಲ್ಲಿ ಅವರು ನೆಲೆಯಾಗುತ್ತಾರೆ. ಅದೇ ಬ್ರಾಹ್ಮಣರ ಮನದಲ್ಲಿ ಶಾಂತಿ ನೆಲೆಸುವ ಬದಲು ಸಾಮಾನ್ಯನು ಅಸಾಮಾನ್ಯನಾದದ್ದು, ಅವರಿಗೆ ಅಸೂಯ ದ್ವೇಷ ಇತ್ಯಾದಿ ಭಾವನೆಗಳಿಂದ ಕೂಡಿದ್ದು, ಇಂದಿನ ಸ್ಥಿತಿಯಲ್ಲಿ ಬ್ರಾಹ್ಮಣರು ಬಹಳ ಕೆಳವರ್ಗದಲ್ಲಿ ಕಾಣುತ್ತಾರೆ.

ಈ ಎಲ್ಲ ಅಂಶಗಳನ್ನು ಒಳಗೊಂಡ ಕೃತಿಯಾದ 'ರಾಮಧಾನ್ಯ ಚರಿತೆ' ಕನ್ನಡ ಸಾಹಿತ್ಯ ಜಗತ್ತಿನಲ್ಲಿ ಪ್ರಖ್ಯಾತ ಕೃತಿಗಳ ಸಾಲಿನಲ್ಲಿ ಅದು ಇಂದಿಗೂ ಕೂಡ ತನ್ನ ಸ್ಥಾನವನ್ನು ಗಟ್ಟಿಗೊಳಿಸಿಕೊಂಡಿದೆ.

---

**೪. ಕೀರ್ತನೆಗಳು:** ಕನಕದಾಸರು ಕಾವ್ಯಗಳನ್ನು ಬರೆದು, ಪ್ರಖ್ಯಾತರಾದಂತೆ, ಕೀರ್ತನೆಗಳನ್ನು ರಚಿಸಿ, ಕೀರ್ತನ ಸಾಹಿತ್ಯದಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಕೀರ್ತನೆಗಳಲ್ಲಿ ದಾಸರು ಸಾಮಾಜಿಕ ಪ್ರಜ್ಞೆ, ಜೀವನಾನುಭವ, ಭಗವದ್‌ಭಕ್ತಿ, ಅನುಭಾವ-ಅನುಭೂತಿಗಳೆಲ್ಲ ಈ ಕೀರ್ತನಾ ಸಾಹಿತ್ಯದಲ್ಲಿ ಹೆಪ್ಪುಗಟ್ಟಿ ನಿಂತಿದೆ. ಈ ಕೀರ್ತನಾ ಸಾಹಿತ್ಯ ಜೀವನದ ಎಲ್ಲಾ ಸ್ತರಗಳನ್ನು ತೆಗೆದುಕೊಂಡು ಬದುಕಿನ ಅರ್ಥಮೌಲ್ಯಗಳನ್ನು ಎಳೆ ಎಳೆಯಾಗಿ ತಿಳಿಸಿಕೊಡುವ ಸಾಹಿತ್ಯವಾಗಿದೆ. ಒಂದೊಂದು ಕೀರ್ತನೆಗಳು ಒಬ್ಬೊಬ್ಬರಿಗೆ ಒಂದೊಂದು ಸನ್ನಿವೇಶದಲ್ಲಿ ದಾರಿ ತೋರಬಲ್ಲ ದೀಪಗಳಂತೆ ಕಂಡುಬರುತ್ತವೆ. ಕುಲವನ್ನು ಖಂಡಿಸುವಲ್ಲಿ ನೀಚೋಚ್ಚಭಾವಗಳನ್ನು ಟೀಕಿಸುವಲ್ಲಿ, ಢಾಂಬಿಕ ಭಕ್ತಿಯನ್ನು ವಿಡಂಬಿಸುವಲ್ಲಿ ಜೀವನದ ನಶ್ವರತೆಯನ್ನು ಮನಗಾಣಿಸುವಲ್ಲಿ, ಸನ್ಮಾರ್ಗವನ್ನು ತೋರಿಸುವಲ್ಲಿ, ಜೀವನಕ್ಕೆ ಬೇಕಾಗುವ ಸಾಂತ್ವನ ಹೇಳುವಲ್ಲಿ, ಬಿದ್ದ ಬದುಕಿಗೆ ಧೈರ್ಯ ತುಂಬುವಲ್ಲಿ, ಜೀವನಕ್ಕೆ ಮುಕ್ತಿ ಮಾರ್ಗ ಬೋಧಿಸುವಲ್ಲಿ ಸಫಲವಾಗಿವೆ ಎಂದರೆ ತಪ್ಪಲ್ಲ.

ಹರಿದಾಸ ಪರಂಪರೆಯಲ್ಲಿ ಕವಿ, ಕೀರ್ತನಾಕಾರರಾಗಿ, ವಿಶಿಷ್ಟತೆಯ ವ್ಯಕ್ತಿತ್ವವನ್ನು ಹೊಂದಿ ಪ್ರಸಿದ್ಧರಾದವರು ಕನಕದಾಸರು ಮಾತ್ರ. ಉಳಿದ ಹರಿದಾಸರೆಲ್ಲಾ ಭಕ್ತಿಯ ಮೂಲಕ ಕೀರ್ತನಾ ಸಾಹಿತ್ಯ ಸಮುದ್ರವೊಂದನ್ನೇ ಈಜಿದವರು. ಆದರೆ, ಕನಕದಾಸರು ಅಂದಿನ ಸಾಂಸ್ಕೃತಿಕ ಜಗತ್ತಿನ ಮಹಾಕೀರ್ತನಾಕಾರರು ಕೂಡ ಮಾತ್ರವಲ್ಲದೆ, ಕೀರ್ತನೆಗಳ ಮೂಲಕ ಸಮಾಜವನ್ನು ತಿದ್ದುವಲ್ಲಿ, ನೈತಿಕತೆಯ ಜವಾಬ್ದಾರಿಯನ್ನು ಪ್ರದರ್ಶಿಸುವುದರಲ್ಲಿ, ಭಕ್ತಿಯ ಮಹಾಪೂರದಲ್ಲಿ ಸ್ತುತಿಗೀತೆಗಳು, ನಿಂದಾಸ್ತುತಿಗಳು ಇತ್ಯಾದಿಯಾಗಿ ವಿಷಯಗಳನ್ನೊಳಗೊಂಡ ಕೀರ್ತನೆಗಳ ಸೃಷ್ಟಿಗೆ ಕಾರಣಕರ್ತರು. ಕನಕ-ಪುರಂದರರು ಒಂದೇ ಸಮಕಾಲೀನ ಸಮಾಜದಲ್ಲಿ ಬದುಕಿದ್ದರು ಕೂಡ ಅವರಲ್ಲಿ ಭಿನ್ನ ಮನೋಧರ್ಮ ಕಂಡುಬರುವುದು ಕಾಣುತ್ತದೆ. ಪುರಂದರರು ವ್ಯಂಗ್ಯ-ವಿಡಂಬನೆ, ಭಕ್ತಿಗೆ ತಮ್ಮ ಕೀರ್ತನೆಗಳನ್ನು ಬಳಸಿಕೊಂಡರು. ಕನಕದಾಸರು ಅಂದಿನ ಸಮಾಜವನ್ನು ಮತ್ತು ಸಮಾಜದಲ್ಲಿನ ಅಸಮತೋಲನಗಳನ್ನು ಕುರಿತು ಸಾಮಾಜಿಕ ವಿಷಯಗಳು, ಧಾರ್ಮಿಕದ ವಿಡಂಬನೆ, ನೈತಿಕತೆಯ ಪ್ರದರ್ಶನ ಈ ಅಂಶಗಳಿಂದ ಸಮಾಜದ ಓರೆಕೋರೆಗಳನ್ನು ತಿದ್ದಲು ಪ್ರಯತ್ನಿಸಿದರು. ಈ ವಿಷಯದಿಂದ ಪುರಂದರದಾಸರಿಗಿಂತ ಕನಕದಾಸರು ಇಂದಿಗೂ ಕೂಡ ಪ್ರಸ್ತುತವಾಗುತ್ತಾರೆ. ಅಷ್ಟೇಯಲ್ಲ, ಕನಕ-ಪುರಂದರದಾಸರಲ್ಲಿ ಕೀರ್ತನಾ ಸಂಖ್ಯೆಲ್ಲಿ ಪುರಂದರರು ಮುಂದಿದ್ದಾರೆ. ಆದರೆ, ಕೀರ್ತನಾ ಸಾಹಿತ್ಯವು ಕಾವ್ಯಾತ್ಮಕವಾಗಿ, ವಿಶಿಷ್ಟತೆಯಲ್ಲಿ ಕನಕದಾಸರು ಇಡೀ ಕೀರ್ತನಾ ಸಾಮ್ರಾಜ್ಯದಲ್ಲಿ ಹರಿದಾಸ ಪರಂಪರೆಯಲ್ಲಿಯೇ ರಾರಾಜಿಸುತ್ತಾರೆ.

ಕನಕದಾಸರ ಕೀರ್ತನೆಗಳು ಸಂಖ್ಯಾದೃಷ್ಟಿಯಿಂದ ಕಡಿಮೆ ಇದ್ದರೂ ಮೌಲಿಕವಾಗಿ ಅವು ಉನ್ನತಸ್ಥಾನ ಪಡೆದಿವೆ. ಬದುಕಿನ ನಾನಾ ಮುಖಗಳನ್ನು, ನಾನಾ ಭಾವನೆಗಳನ್ನು, ಭಕ್ತಿ ಜೀವನದ ಅಳಿವು-ಉಳಿವು, ಭಕ್ತಿಯಲ್ಲಿ ಢಾಂಬಿಕತೆ, ಜಾತಿ, ಕುಲ ಇತ್ಯಾದಿ ವಿಚಾರಗಳಿಗೆ ಅರ್ಥ ಹುಡುಕುವ ರೀತಿಯಲ್ಲಿ ಕನಕದಾಸರು ತಮ್ಮ ಕೀರ್ತನಾ ಸಾಹಿತ್ಯದಲ್ಲಿ ವಿಚಾರಧಾರೆಯನ್ನು ಹರಿಯಬಿಟ್ಟಿದ್ದಾರೆ. ಈ ಕೀರ್ತನೆಗಳು ತ್ರಿಕಾಲ ಸತ್ಯಗಳನ್ನು ಹೊಂದಿದ ನುಡಿಗಬ್ಬಗಳಾಗಿವೆ. ಪ್ರತಿಯೊಂದು ಕೀರ್ತನೆಯೂ ತನ್ನದೇಯಾದ ವಿಶೇಷತೆನ್ನು ಅಡಗಿಸಿಕೊಂಡಿದೆ. ಅವರು ಬೆಳೆದು ಬಂದ ಪರಿಸರ ಹಾಗೂ ಕಂಡು ಅನುಭವಿಸಿದ ರಾಗ-ದ್ವೇಷಗಳ ಎಲ್ಲಾ ಅನುಭವಪಾಕವಾಗಿ ಕೀರ್ತನಾಸಾಹಿತ್ಯವಿದೆ. 'ಕುಲ ಕುಲ ಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ'? ಇಂಥ ಪ್ರಶ್ನೆ ಕೇಳುವಲ್ಲಿ, ಕುಲದಿಂದಾಗುವ ಅನ್ಯಾಯದ ಬೇರುಗಳನ್ನು ಅಮೂಲಾಗ್ರವಾಗಿ ಕೀಳುವ ಧೈರ್ಯ ಮಾಡಿದ್ದಾರೆ. ಉಚ್ಚ ಕುಲ, ನೀಚ ಕುಲ ಮುಂದುವರೆದವರು, ಹಿಂದುಳಿದವರು, ಸ್ಪೃಶ್ಯರು, ಅಸ್ಪೃಶ್ಯರು, ಬ್ರಾಹ್ಮಣ-ಶೂದ್ರ ಈ ರೀತಿಯಾಗಿ ಅವಹೇಳನ ಮಾಡುವುದು, ನಿಂದಿಸುವುದು ಸರಿಯಲ್ಲ, ಕುಲದ ನೆಲೆಯನ್ನು ತಿಳಿದು ಅದರ ನೆಲೆಗಟ್ಟಿನ ಮೇಲೆ ನಿಂತ ು ಮನುಷ್ಯ ಮನುಷ್ಯರ ನಡುವಿನ ಈ ಜಾತಿಗೋಡೆಯನ್ನು ನೆಲಸಮ ಮಾಡುವ ಕಾರ್ಯದಲ್ಲಿ ಬಾಗಿಯಾಗುವವರು ಕುಲಜರೆಂದು ತಿಳಿದು, ಸಮಾಜದಲ್ಲಿ ಬಾಳಬೇಕಾಗಿದೆ.

"ಕುಲ ಕುಲ ಕುಲವೆನ್ನುತಿಹರು
ಕುಲವಾಹುದು ಸತ್ಯ ಸುಖವುಳ್ಳ ಜನರಿಗೆ?"

ಸತ್ಯದ ಆದರ್ಶಗಳನ್ನು ಹೊಂದಿದ ಜನರಿಗೆ ಕುಲದ ಅಥವಾ ಜಾತಿಯ ಬೇಧವಿರುವುದಿಲ್ಲ. ಹುಟ್ಟಿನಿಂದ ಜಾತಿಯನ್ನು ಹುಡುಕಬಾರದು, ಅದು ಅವರು ಬದುಕುವ ರೀತಿ ನೀತಿಗಳಿಂದ ಹಾಗೂ ಅವರ ಸಮಾಜದ ಸಂಬಂಧಗಳ ಮೂಲಕ ಜಾತಿಯನ್ನು ಹುಡುಕಬೇಕು. "ಕೆಸರಿನಲ್ಲಿ ಹುಟ್ಟಿದ ಕಮಲಕ್ಕೆ ಕೆಸರಿನ ಸೋಂಕಿಲ್ಲ, ಹಾಲೂ ಮಾಂಸದಿಂದ ಉತ್ಪತ್ತಿಯಾದರೂ ಅದಕ್ಕೆ ಮಾಂಸದ ಲೇಪನವಿಲ್ಲ". ಹುಟ್ಟಿದ ಮೂಲ ಮುಖ್ಯವಲ್ಲ, ಅವರು ಬೆಳೆದು-ಬಾಳಿ ಬದುಕುವ ರೀತಿ - ನೀತಿಗಳೆ ಮುಖ್ಯ. ಸತ್ಯವಂತರಿಗೆ ಕುಲವೆಂಬುದೇ ಇಲ್ಲ. ಆದ್ದರಿಂದ ಪಂಪ 'ಮನುಷ್ಯಜಾತಿ ತಾನೊಂದೆ ವಲಂ' ಎನ್ನುತ್ತಾನೆ.

'ಡಿಂಬದಲ್ಲಿ ಇರುವ ಜೀವ ಕಂಬ ಸೂತ್ರ ಗೊಂಬೆಯಂತೆ
ಎಂದಿಗಿದ್ದರೊಂದು ದಿನ ಸಾವು ತಪ್ಪದು ಹುಟ್ಟಿತೇನು ತಾರಲಿಲ್ಲ'

ಕಂಬದ ಮೇಲಿರುವ ಗೊಂಬೆ ಸೂತ್ರದ ಆಧಾರ ತಪ್ಪಿದರೆ, ಬೀಳುವುದು. ಎಲುಬು, ಮಾಂಸ, ರಕ್ತ-ಅಸ್ಥಿಗಳಿಂದ ತುಂಬಿರುವ ಈ ದೇಹ ಬಿದ್ದುಹೋದರೆ, ದೇಹ ಕೊಳಕಿಗೆ ತುತ್ತಾಗುತ್ತದೆ. ಈ ಅಶಾಶ್ವತವಾದ ದೇಹಕ್ಕೆ ಬೆಲೆ ಕೊಡದೆ, ಜೀವಭಾವಕ್ಕೆ ಬೆಲೆಕೊಟ್ಟು ಅದು ದೇವಭಾವಕ್ಕೆ ಏರುವಂತೆ ಮಾಡಬೇಕು ಎನ್ನುವುದು ಕನಕರ ಆಶಯ. ಭಗವಂತನಲ್ಲಿ ಅಚಲವಾದ ಭಕ್ತಿಯಿಟ್ಟು ಬದುಕಬೇಕು. ಹಿಗ್ಗುವಿಕೆ - ಕುಗ್ಗುವಿಕೆಯಿಂದ ಬಿಡುಗಡೆ ಪಡೆದು ನಿರ್ಮೋಹಿಗಳಾಗಿ ಜೀವನ ಸಾಗಿಸಬೇಕು. ಇದು ಕನಕರ ಕೀರ್ತನಾ ಸಾಹಿತ್ಯದ ಆಶಯ.

ಅನುಭವಗಳಿಂದ ಮನಸ್ಸು ರೋಸಿ ಹೋಗಿ, ಸ್ವಾಭಿಮಾನಗಳಾದ ಅವರು ಮಾಂಡಲಿಕಪದವಿಯನ್ನು ತಿರಸ್ಕರಿಸಿ, ದಾಸರಾಗಿರಬೇಕು. ಅರಸು-ಮಂತ್ರಿ, ದಣಿ-ಆಳು, ಮಾಲೀಕ-ಕಾರ್ಮಿಕ - ಇತ್ಯಾದಿ ಭೇದಾತ್ಮಕವಾದ ಮಾನವೀಯ ಸಂಬಂಧಗಳಿಂದಾಗಿ, ಕೆಳಗಿನವರು ಮೇಲಣವರ ಕೈಯಲ್ಲಿ ನಾನಾ ಹಿಂಸೆ ಕೋಟಲೆಗಳನ್ನು ಅನುಭವಿಸುವುದನ್ನು ದಾಸರು ಕಣ್ಣಾರೆ ಕಂಡು ಮರುಗಿರಬೇಕು. ಮೇಲು ಕೀಳುಗಳ ದೆಸೆಯಿಂದಾಗಿ ಚಿತ್ರ ಹಿಂಸೆಯನ್ನನುಭರಿಸುವುದರ ಬದಲು ಕೇಶವನನ್ನು ಮೊರೆಹೋಗುವುದೇ ಲೇಸೆಂದು ಅವರು ಭಾವಿಸುತ್ತಾರೆ.

"ಸಾಕು ಸಾಕು ಮನುಜ ಸೇವೆಯ ರಂಗಯ್ಯ ಇನ್ನು
ಸಾಕು ಸಾಕು ಮನುಜ ಸೇವೆ ಮಾಡಿ ದಣಿದೆ ನೊಂದೆ ನಾನು ......." ಎಂದು ಮನದುಂಬಿ ಬರೆಯುತ್ತಾರೆ. "ಹೊತ್ತರೆದ್ದು ಪೋಗಿ ಪರರ ಚಿತ್ತವೃತ್ತಿಯನ್ನೇ ಅರಿತು / ನಿತ್ಯದಲ್ಲಿ ಹಲವು ಕೆಲಸಭೃತ್ಯನಂತೆಮಾಡಿ....." ಆಸೆಯೆಂಬುದು ಮನುಷ್ಯನಿಂದ ಎಂಥ ಅವಮಾನಕರವಾದ ಕೆಲಸವನ್ನಾದರೂ ಮಾಡಿಸುತ್ತದೆ. ಎಂಥ ಹೀನಾಯವಾದ ಸಂಕಟಕ್ಕಾದರೂ ಅವನನ್ನು ನೂಕುತ್ತದೆ, ಪರರ ಸೇವೆಯಿಂದ ಆತ್ಮ ಹಾನಿಯೂ ಸಂಭವಿಸುತ್ತದೆಂಬ ಭಾವನೆ ಹೃದಯಕ್ಕೆ ತಟ್ಟುವಂತೆ ಅಭಿವ್ಯಕ್ತಗೊಂಡಿದೆ.

ದೊರೆತನ ಸಿರಿತನಗಳು ಕೇವಲ ಆಕಸ್ಮಿಕ, ಶಾಶ್ವತವಲ್ಲ ; ಅವು ಪ್ರಾಪ್ತವಾದಾಗ ವಿನಯ ಹೆಚ್ಚಿದಷ್ಟು ಮನುಷ್ಯನಿಗೆ ಸುಖಶಾಂತಿ ಲಭಿಸುತ್ತದೆ. ಅಧಿಕಾರವಾಗಲೀ, ಶ್ರೀಮಂತಿಕೆಯಾಗಲಿ ಮನುಷ್ಯನಿಂದ ಮಾಡಿಸದ ಹೇಯ ಕರ್ಮವಿಲ್ಲ; ಅಂಥ ಹೇಯ ಕರ್ಮದ ಫಲ ಆತ್ಮ ವಿನಾಶ ಮಾತ್ರವಲ್ಲ, ಸಮಾಜ ಪತನವೂ ಸಂಭವಿಸುತ್ತದೆ. ದೊರೆತನ ಬಂದಾಗ ಕೆಟ್ಟನುಡಿಯಲು ಬೇಡ/ ಸಿರಿಬಂದ ಕಾಲಕ್ಕೆ ಉರಿಯಬೇಡ......" ಕನಕದಾಸರು ದೊರೆಯಾಗಿ ಕನಕದ ಗಣಿಯ ಮೇಲೆ ನಿಂತಿದ್ದವರು ತಮ್ಮಂತೆಯೇ ಕನಕಪತಿಗಳಾಗಿದ್ದ ಜನರನ್ನು ಕಂಡವರು ಹೊನ್ನಿನ ಕಣಜ ತುಂಬಿದಂತೆಲ್ಲಾ ಪಾಪದ ಕೊಡವೂ

ಭರ್ತಿಯಾಗುತ್ತಿತ್ತೆಂಬುದನ್ನು ಅವರು ಬಲ್ಲವರು. ಸಂಪತ್ತು ಬೇಕು ; ಜೀವನಕ್ಕೆಷ್ಟೋ ಅಷ್ಟೆ. "ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು ಗಳಿಸದಿರು ನೀ ದುರಿತ ರಾಶಿಗಳನು" ಐಶ್ವರ್ಯ ಕೈಸೇರಿತೆಂದರೆ, ಮಾನವನ ಆಶೆ ಅಮಿಷಗಳು ಹತ್ತು ದಿಕ್ಕುಗಳಿಗೂ ನಾಲಿಗೆ ಚಾಚಿ, ಸಿಕ್ಕಿದ್ದನ್ನೆಲ್ಲಾ ಬಾಚಿಕೊಳ್ಳುತ್ತವೆ. ಬಡವನಿಗಾದರೆ, ಆಶೆಯೂ ಇಲ್ಲ, ಚಿಂತೆಯೂ ಇಲ್ಲ. ಪಾಪದ ಸೋಂಕು ಸಹ ಇಲ್ಲ.

ಈ ಮೇಲಿನ ಅಂಶಗಳನ್ನು ಮನಗಂಡರೆ, ಕನಕದಾಸರು ಹರಿದಾಸ ಸಾಹಿತ್ಯದಲ್ಲಿ ತಮ್ಮ ವಿಶಿಷ್ಟತೆಯನ್ನು ಹೇಗೆ ಪಡೆದುಕೊಳ್ಳುತ್ತಾರೆ ಎಂಬುದನ್ನು ಮನಗಾಣಬಹುದು.

"ಕಾವ್ಯದೃಷ್ಟಿಯಿಂದ ಪುರಂದರ ದಾಸರ ಕೀರ್ತನೆ ಹೆಚ್ಚು ಸಂಪನ್ನವಾಗಿ, ಸರಸವಾಗಿ ಮೂರ್ತವಾದ ವರ್ಣರಂಜನೆ ಉಳ್ಳದ್ದಾಗಿ ಇರಬಹುದು. ಅದರಲ್ಲಿ ಬದುಕಿನ ಹೆಚ್ಚು ವಿಲಾಸವಿದೆ. ತಿಳಿ ಬಗೆಯಿದೆ ; ಹಾಸ್ಯವಿದೆ ; ಮಾನವತೆಯ ಅಂಶವಿದೆ. ಕನಕರಲ್ಲಿ ಆಳ ಹೆಚ್ಚು. ಪುರಂದರರಲ್ಲಿ ಹೆಚ್ಚು ಪಾಂಡಿತ್ಯದ ಬೆಡಗಿಲ್ಲ ; ಇಲ್ಲಿ ತಾತ್ವಿಕತೆಯ ಆಳ ಶಾಸ್ತ್ರಾಂಶ ಹೆಚ್ಚಿದೆ. ಧ್ವನಿ ಹೆಚ್ಚು ಗಂಭೀರ" (ವಿಮರ್ಶೆ ಸಂಪುಟ ೨-೩೫೮)

ಕನಕದಾಸರಿಗೆ ಅನುಭವವನ್ನು, ಸಮುದಾಯವನ್ನು ಒಂದೇ ಒಂದು ವಾಕ್ಯದಲ್ಲಿ ಸರ್ವಗ್ರಾಹ್ಯವಾಗುವಂತೆ ಸೂತ್ರೀಕರಿಸುವ ಜಾಣ್ಮೆ ಅವರಿಗೆ ವಶವಾಗಿದೆ. ಕವಿಯ ಅಂತರ್ದೃಷ್ಟಿಯುಳ್ಳ ಕನಕದಾಸರಿಗೆ ಪ್ರಜ್ಞೆಗೆ ನಿಲುಕದ ಲೋಕ ಅಥವಾ ಸಮಾಜಪರವಾದ ವಾಸ್ತವ ಸತ್ಯದರ್ಶನವಿಲ್ಲ. ಅವರ ಕಣ್ಣು ಹಾಯ್ದೆಡೆ, ಮನಸ್ಸು ಹರಿದೆಡೆ ಸತ್ಯ ಗೋಚರಿಸುತ್ತದೆ ; ಆ ಸತ್ಯ ಅವರ ಅನುಭವದ ಭಾಗವಾಗುತ್ತದೆ.

ಮಾನವ ನಿರ್ಮಿತ ಮತ-ಧರ್ಮಗಳನ್ನು ಮೀರಿ ಬೆಳೆದ ಕನಕದಾಸರು ವೈದಿಕ-ಶೈವ-ಇಸ್ಲಾಂ ಮತಗಳ ಢಾಂಬಿಕತನವನ್ನು ತೀವ್ರವಾಗಿ ಟೀಕಿಸಿ, ಮಾನವೀಯತೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಹಾಗಾಗಿಯೇ ಅವರಿಗೆ ಹರಿದಾಸ ಪರಂಪರೆಯಲ್ಲಿ ವಿಶಿಷ್ಟರಾಗುತ್ತಾರೆ.

ಕೀರ್ತನೆಗಳ ಸಂಖ್ಯೆ ಕಡಿಮೆಯಿದ್ದರೂ ಉಳಿದ ಹರಿದಾಸರ ಕೀರ್ತನೆಗಳಿಗಿಂತ ಇವರ ಕೀರ್ತನೆಗಳಲ್ಲಿ ಕಾವ್ಯ ಸೌಂದರ್ಯ ಹೆಚ್ಚು. ವಿಡಂಬನೆ, ಮಾನವೀಯ ಸಹಾನುಭೂತಿ - ತುಡಿತಗಳು ವಿಶೇಷವಾಗಿ ವ್ಯಕ್ತವಾಗಿದೆ.

'ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಹಲುವನು ಇದಕೆ ಸಂಶಯವಿಲ್ಲ......'

'ತನು ನಿನ್ನದು ಜೀವನ ನಿನ್ನದೋ
ಅನುದಿನದಲ್ಲಿ ಬಹ ಸುಖದುಃಖ ನಿನ್ನದಯ್ಯಾ.......'

'ನೀ ಮಾಯೆಯೊಳಗೋ ನೀನ್ನೊಳು ಮಾಯೆಯೋ
ನೀ ದೇಹದೊಳಗೋ ನಿನ್ನೊಳು ದೇಹವೋ.......'

'ಇವುಗಳಲ್ಲಿ ಕೆಲವು ಸುಂದರ ಭಾವಗೀತೆಗಳ ಶಿಲ್ಪವನ್ನು ಪಡೆದಿವೆ. ಹೀಗಾಗಿ ಈ ಶೂದ್ರ ಕವಿಯಿಂದ ದಾಸ ಸಾಹಿತ್ಯಕ್ಕೆ ಮಹತ್ವ ಬಂದಿದೆ'.

'ಬೌದ್ಧಿಕ ಕಸರತ್ತಿನಂತೆ ಕಂಡು ಬಂದರೂ, ಇವರು ಮುಂಡಿಗೆಗಳನ್ನು ರಚಿಸಿ, ತಮ್ಮ ಧೀಮಂತತೆಯನ್ನು ಮೆರೆದಿದ್ದಾರೆ'.

'ಅಸಮಾನತೆಯ ವಿರುದ್ಧ ಪ್ರತಿಭಟನೆ, ವರ್ಣ ವ್ಯವಸ್ಥೆಯ ವಿರುದ್ಧ ಆಕ್ರೋಶ, ಮೌಢ್ಯಕಂದಾಚಾರಗಳ ಖಂಡನೆ, ಸಾಮಾಜಿಕ ಕಳಕಳಿ, ಕಾವ್ಯ ಪ್ರತಿಭೆ, ಪ್ರತಿಮಾ ವೈಭವ, ಜನಭಾಷೆ, ಬದುಕಿನ ತಿಳಿವು ಇವರ ಸಾಹಿತ್ಯದಲ್ಲಿ ತುಂಬಿರುವುದು ಕಂಡುಬರುತ್ತದೆ'.

'ವೃತ್ತ ರೂಪದಲ್ಲಿದ್ದ ಶತಕ ಸಾಹಿತ್ಯ, ಕನಕದಾಸರಲ್ಲಿ ಷಟ್ಪದಿ ರೂಪಧಾರಣೆ ಮಾಡಿದುದು'. 'ಸಂಪ್ರದಾಯ ಜಡ ಪಂಡಿತವರ್ಗದಿಂದ ಕನಕದಾಸರಿಗೆ ಪುರಸ್ಕಾರ ದೊರೆಯಲಿಲ್ಲ. ಆದ್ದರಿಂದ ಅವನ ಈ ಪರಿಸರದ ಕೀರ್ತನೆಗಳೆಂದರೆ ನೋವಿನ ನುಡಿಗಳು ; ಸಾಮಾನ್ಯವಾಗಿ ತಿಳಿಯಲಾಗದಂತೆ ಕ್ರಾಂತಿಯ ಕಿಡಿಗಳಲ್ಲಿ'.

—

ಅಧ್ಯಾಯ - ೪

# ರಾಮಧಾನ್ಯ ಚರಿತೆ - ಸಾಮಾಜಿಕ ಮತ್ತು ಪೌರಾಣಿಕ ಅಂಶಗಳು

ರಾಮಧಾನ್ಯಚರಿತೆ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಉತ್ತಮ ಕೃತಿಗಳ ಸಾಲಿನಲ್ಲಿ ಸ್ಥಾನಪಡೆದಿದೆ. ಈ ಕಾವ್ಯವನ್ನು ಕುರಿತ ಅನೇಕ ವಿದ್ವಾಂಸರ ಅಭಿಪ್ರಾಯವನ್ನು ಗಮನಿಸಿದರೆ, ಇದು ಒಂದು 'ಸಮಾಜದಲ್ಲಿ ಶೋಷಿತರ ಮತ್ತು ನೊಂದವರೆಲ್ಲರ ಆತ್ಮಕಥೆಯಾಗಿದೆ'. ಇದು ಕನಕಸಾದಸರೊಬ್ಬರಿಗೆ ಆದ ಸಮಸ್ಯೆಯಲ್ಲ. ಪುರಾಣಕಾಲದ ಸಮಾಜದಿಂದ ಇಂದಿನ ಆಧುನಿಕ ಸಮಾಜವರೆಗೆ ಜನಸಾಮಾನ್ಯರ ಸಮಸ್ಯೆಯಾಗಿ ಕಾಡಿದೆ. "ರಾಮಾಯಣ ಮಹಾಭಾರತಗಳ ಕಾಲದಿಂದ ವರ್ಣಬೇಧ ಮತ್ತು ಜಾತಿ ವೈಷಮ್ಯಗಳು ಭರತಖಂಡದ ಅಸ್ತಿತ್ವದ ಬುಡವನ್ನೇ ಅಲುಗಾಡಿಸುತ್ತಿದೆ ಎಂಬುದು ಸರ್ವವಿದಿತವಾದ ವಿಷಯ. ವರಿಷ್ಠ ಕನಿಷ್ಠ ಜಾತಿಗಳ ಕಲ್ಪನೆಯೇ ಭರತಖಂಡವನ್ನು ವಿನಾಶದೆಡೆಗೆ ನೂಕಿದೆಯೆಂಬ ಐತಿಹಾಸಿಕ ಸತ್ಯಕ್ಕೆ ಪಾಕಿಸ್ತಾನ ಜ್ವಲಂತ ನಿದರ್ಶನವಾಗಿದೆ. ಹದಿನಾರನೇಯ ಶತಮಾನದಲ್ಲಿ ಈ ಸಾಮಾಜಿಕ ರೋಗರುಜಿನಗಳು ಎಂಥ ಉಲ್ಬಣಾವಸ್ಥೆಯಲ್ಲಿದ್ದುವೆಂಬ ವಾಸ್ತವಿಕ ಸಂಗತಿಗೆ ಈ ಕೃತಿ ಕನ್ನಡಿಯಾಗಿದೆ. ಮಹಾಭಾರತದ ಏಕಲವ್ಯನಿಗೆ ಒದಗಿದ ಸಂಕಟವೇ ಕನಕದಾಸರಿಗೂ ಒದಗಿರಬೇಕು. ಅವನು ಕುರುಬನಾದರೂ ಮಹಾಮಾಂಡಲಿಕನಾಗಿದ್ದ ; ರಾಜಕಾರ್ಯ ದುರಂಧರನಾಗಿದ್ದ. ವ್ಯವಹಾರ ಕುಶಲನಾಗಿದ್ದ. ಜೊತೆಗೆ ಕಾವ್ಯಾಭ್ಯಾಸದಿಂದ ಸುಜ್ಞಾನಿಯಾಗಿದ್ದ. ಅಂಥವನನ್ನೇ ಉತ್ತಮ ವರ್ಗವೆನಿಸಿಕೊಂಡ ಜನ ಹತ್ತಿರಕ್ಕೆ ಸೇರಿಸುತ್ತಿದ್ದಂತೆ ಕಾಣುವುದಿಲ್ಲ. ಮೊದಮೊದಲು ತಾತಾಚಾರ್ಯರಿಗಾಗಲೀ, ವ್ಯಾಸರಾಯರಿಗಾಗಲೀ ಅವನ ಬಗೆಗೆ ಸಹಾನುಭೂತಿಯಿರಲಿಲ್ಲ. ಕೊನೆಕೊನೆಗೆ ಗುರುಕರುಣೆ ದೊರೆತರೂ ಸಹ ಶಿಷ್ಯರ ಕಾಟ ತಪ್ಪಲಿಲ್ಲ" (ಕನಕದರ್ಶನ ೧೧೮-೧೧೯) ಕನಕದಾಸರು ಕೂಡ ಅಂದಿನ ಕಾಲಮಾನದಲ್ಲಿ ಶೋಷಣೆಗೆ ಒಳಗಾದವರು ಮತ್ತು ಶೋಷಿತವರ್ಗದ ಪರವಾದ ಶಕ್ತಿಯಾಗಿದ್ದರು, ಆದ್ದರಿಂದಲೇ ಅವರು ಅಂದಿನ ಸಾಮಾನ್ಯ ಜನಪ್ರತಿನಿಧಿಯಾಗಿ 'ರಾಗಿ'ಯಂತೆ ಗಟ್ಟಿಯಾಗಿ ಅಂದರೆ, ಸತ್ವಶಾಲಿಯಾಗಿ ಕಂಡುಬರುತ್ತಾರೆ. ಅಂದಿನ 'ಮೇಲ್ವರ್ಗದವರ ಮನದಲ್ಲಿ ಏನಾದರೂ ಸ್ವಲ್ಪ ಗೌರವ ಭಾವನೆ ಇದ್ದರೆ, ಅದು ಕನಕದಾಸರಲ್ಲಿ, ಆದರೆ ಅದನ್ನು ತೋರ್ಪಡಿಸಿಕೊಳ್ಳುವಲ್ಲಿ ಅವರಿಗೆ ತಮ್ಮ ಮಡಿ, ಮೈಲಿಗೆ ಅಡ್ಡಗೋಡೆಯಾಗಿತ್ತು. ಇಂತಹ ಸ್ಥಿತಿಯಲ್ಲಿ ವ್ಯಾಸರಾಯರು ಅವರನ್ನು ಶಿಷ್ಯರಾಗಿ ಸ್ವೀಕರಿಸಿದ ಮೇಲೆ, ಕೆಲವು ಮೇಲ್ವರ್ಗದ ಜನರಿಗೆ ಕನಕನಲ್ಲಿ ಗೌರವಾದರವಿತ್ತು. ಆದರೆ ಅದನ್ನು ಬಹಿರಂಗವಾಗಿ ತೋರ್ಪಡಿಸಲಾರದ ಮಾನಸಿಕ ಶಕ್ತಿಹೀನರಾಗುತ್ತಾರೆ. ಏಕೆಂದರೆ ಅವರ ಅನನ್ಯ ಭಕ್ತಿ, ಮೇಧಾವಿತನ, ಜ್ಞಾನವಂತಿಕೆಗೆ ಮೇಲ್ವರ್ಗದಲ್ಲಿಯೂ ಮಣಿಯುವವರಿದ್ದರೂ,

ಕನಕರು ಕೇಶವನ ಅನನ್ಯಭಕ್ತರಾಗಿ ಕಂಡುಬರುತ್ತಾರೆ. ಈ ಸಾಮಾಜಿಕ ಅಂಶಗಳಾದ ಜಾತಿ/ವರ್ಗದ ಅಂಶಗಳು ಎಲ್ಲಾಕಾಲದಲ್ಲಿಯೂ ಸಮಾಜವನ್ನು ತಾರತಮ್ಯ ಬಾವನೆಯಿಂದ ಮುಕ್ತವಾಗಿಸಿಲ್ಲ. ಅಲ್ಲಿ ಎಂತಹ ಮಹಾಮೇಧಾವಿಗಳು ಬಂದರೂ ಕೂಡ ಈ ಅಂಶಗಳು ತೊಡಕಾಗುವುದು ಕಂಡುಬರುತ್ತದೆ. ಆದರೆ ಇಂತಹ ಅಪವಾದಕ್ಕೆ ಕನಕದಾಸರು ಅಪ್ಪಟ ಉದಾಹರಣೆಯಾಗಿದ್ದಾರೆ.

ದಾಸರು ಪಾಂಡಿತ್ಯದ ಪ್ರತಿರೂಪವಾದರೂ, ಭಕ್ತಿಗೆ ಮತ್ತೊಂದು ಹೆಸರಾಗಿದ್ದಾರೆ. ಈ ಮಹಾದಾರ್ಶನಿಕನನ್ನು ಕೂಡ ಈ ಸಾಮಾಜಿಕ ಸಮಸ್ಯೆಗಳು, ಭಾವನೆಗಳು ದಾಸರನ್ನು ಕೂಡ ಹಂತ ಹಂತವಾಗಿ ಕಾಡಿದ್ದು ಮಾತ್ರ ಆಶ್ಚರ್ಯ! ಅಂದರೆ, ಮೇಲ್ವರ್ಗವಾದ ಬ್ರಾಹ್ಮಣರು ಎಲ್ಲಾ ಕಟ್ಟುಪಾಡುಗಳ ಮೂಲಕ ಎಲ್ಲಾ ಕಾಲದಲ್ಲಿಯೂ ಸಮಾಜದಲ್ಲಿ ಪ್ರತಿಷ್ಠಿತರಾಗಿಯೇ ಹಿಡಿತ ಸಾಧಿಸಿದ್ದಾರೆ. ಇವರಿಗೆ ಎಲ್ಲಾ ಕಾಲದಲ್ಲಿಯೂ ಆಳರಸರ ಸಾಮಿಪ್ಯ ಮತ್ತು ಪೋಷಕತನಗಳು ಇವರಲ್ಲಿ ಕೆಳವರ್ಗದವರನ್ನು ಹಿಡಿತದಲ್ಲಿಡಲು ಸಾಧ್ಯವಾಯಿತು. ಬ್ರಾಹ್ಮಣರು ಅರಸರ ಈ ರೀತಿಯ ಸಹಕಾರವನ್ನು ಒಂದು ಅಸ್ತ್ರದಂತೆ ಉಪಯೋಗಿಸಿಕೊಂಡರು. ಸಮಾಜದಲ್ಲಿ ಸಮಾನತೆಯನ್ನು ತರುವ ಬದಲು ಸಮಾಜದಲ್ಲಿನ ಇತರ ಬ್ರಾಹ್ಮಣೇತರರನ್ನು ಅವರು ಧಾರ್ಮಿಕ ಮತ್ತು ಶೈಕ್ಷಣಿಕ ವಾತಾವರಣದಿಂದಲೇ ದೂರ ಮಾಡಿ ಸಮಾಜದಲ್ಲಿನ ಅಸಮತೋಲನವನ್ನೇ ಸೃಷ್ಟಿಸಿದರು. 'ಅಂದಂದಿನ ಕಾಲದಲ್ಲಿ ಬ್ರಾಹ್ಮಣೇತರರಲ್ಲಿ ಕೆಲವು ಮಹಾಪುರುಷರು ಬಂದರು ಕೂಡ, ಅವರು ಮಾಡಿದ ಸದ್ಭಾವನೆಗಳು, ಸತ್ ಸಾಧನೆಗಳು ಕಗ್ಗತ್ತಲೆಯಲ್ಲಿ ಒಂದು ದೀಪ ಹಚ್ಚಿದಂತಾಯಿತೆ ವಿನಃ ಅದು ಎಂದೂ ಜಗತ್ತನ್ನು ಬೆಳಗುವ ಪ್ರಜ್ವಲ ಸೂರ್ಯನಾಗಲಿಲ್ಲ'. ಇಂತಹ ಅಂಶಗಳನ್ನು ಗಮನಿಸಿದಾಗ ಆಳರಸರ ಪ್ರಭಾವದಿಂದ ಮೇಲ್ವರ್ಗದವರು ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುವಲ್ಲಿ ಸಮರ್ಥರಾಗಿದ್ದರು. "ಶತಶತಮಾನಗಳಿಂದ ಕಾಲಕಸವಾಗಿ ಹೇಯ ಜಂತುಗಳಂತೆ ಬಾಳುತ್ತಿರುವ ದಲಿತ ಜನರ, ಎಲ್ಲಾ ಯುಗಗಳ ಎಲ್ಲಾ ದೇಶಗಳ ನತದೃಷ್ಟ ನಿಮ್ನಜನಾಂಗಗಳ ಪ್ರತಿನಿಧಿಯಾಗಿ, ನರೆದಲೆಗನಾಗಿ ಕನಕದಾಸರು ಖಂಡನೆಯ ಖಡ್ಗವೆತ್ತಿದ್ದಾರೆ" (ಕನಕದರ್ಶನ ೧೧೯)

ಕನಕದಾಸರು ಮಹಾ ಸತ್ಪುರುಷರಾಗಿ ಪ್ರತಿಭಾವಂತರೆಂದು ಕಂಡುಬರಲು ಅವರು ಸಾಹಿತ್ಯ ಜಗತ್ತಿಗೆ ನೀಡಿದ ಕೊಡುಗೆ ಪ್ರಶಂಸನೀಯವಾಗಿರುವುದೇ ಕಾರಣ. ಅವರ **ರಾಮಧಾನ್ಯಚರಿತೆ** ಒಂದೇ ಸಾಕು ಅವರನ್ನು ಸಾರಸ್ವತ ಲೋಕದಲ್ಲಿ ಅಮರರಾಗುವಂತೆ ಮಾಡಲು, ಈ ರಾಮಧಾನ್ಯಚರಿತೆ ಅಂದರೆ, ರಾಗಿಯ ಚಮತ್ಕಾರ ಕಥೆ ಒಂದು ಮೂಲತಃ ಜನಪದ ಕತೆಯಾಗಿತ್ತು. ಆ ಕಥೆಯನ್ನು ಬಳಸಿಕೊಂಡು ಪುರಾಣ ಪ್ರತಿಮೆಗಳ ಮೂಲಕ, ಸಾಮಾಜಿಕ ಸಮಸ್ಯೆಯಾದ ಜಾತಿ, ಮಡಿ, ಮೈಲಿಗೆ, ಮೇಲು-ಕೀಳು, ತಾರತಮ್ಯ

ಭಾವನೆಗಳನ್ನು ತೊಡೆದುಹಾಕಲು ಶ್ರಮಿಸಿದರು. 'ಕನಕರ ಕಾಲದಲ್ಲಿ ನೆಲ್ಲು ಸುಪ್ರತಿಷ್ಠರ ಮತ್ತು ಉತ್ತಮ ವರ್ಗದ ಜನರಿಗೆ ನಿತ್ಯೋಪಯೋಗದ ವಸ್ತುವಾಗಿದ್ದು, ಸಾಮಾನ್ಯರಿಗೆ ನಿಲುಕದ ಗಗನಕುಸುಮವಾಗಿತ್ತು. ಗೌರವಭೋಜನದಲ್ಲಿ ಅನ್ನಕ್ಕೆ ಪ್ರಥಮ ಪ್ರಾಶಸ್ತ್ಯವಿತ್ತು. ಹಾರಕಸಾಮೆ ನವಣೆ ರಾಗಿ ಮೊದಲಾದವು ಬಡವರ, ಕನಿಷ್ಠರ, ಸಾಮಾನ್ಯ ಜನರ ದೈನಂದಿನ ಆಹಾರ ಧಾನ್ಯಗಳಾಗಿದ್ದವು. ಇವು ಉತ್ತಮ ವರ್ಗದ ಜನರಿಗೆ ಅಸಹ್ಯವಾದ ವಸ್ತುಗಳಾಗಿದ್ದವು. ಹೀಗೆ ಸರ್ವಪರಿಚಿತವಾದ ರೂಪಕಗಳ ಮೂಲಕ ಸರಳ ಸುಲಭವಾದ ಸಾಮಾನ್ಯ ಭಾಷೆಯಲ್ಲಿ ಜಾತಿಸಂಬಂಧವಾದ ಸಮಸ್ಯೆಯನ್ನು ಬಯಲಿಗೆಳೆದರೆ, ಸಾಮಾನ್ಯ ಜನರಿಗೆ ನಿರಾಯಾಸವಾಗಿ ಮನಮುಟ್ಟುತ್ತದೆಂದು ಕವಿ ನಿರ್ಣಯಿಸುವಲ್ಲಿ, ಅವನ ವಿವೇಕ ಪಕ್ವಗೊಂಡಂತೆ, ಮಾನಸಿಕ ಪ್ರತಿಭೆ ಸದಾ ಜಾಗೃತವಾಗಿರುವಂತೆ ವೇದ್ಯವಾಗುತ್ತದೆ. ಜಾತಿ ಗರ್ವಾಂಧರ ಮೇಲಲ್ಲದೆ, ಬಡವರ ರಕ್ತವನ್ನು ಹೀರುತ್ತಿರುವ ಧನಿಕ ಜಿಗಣೆಗಳ ಮೇಲೆಯೂ ಕವಿ ಕುಠಾರನ್ನೆತ್ತಿದ್ದಾನೆ (ಕನಕದರ್ಶನ ೧೨೦). ಸಮಾಜದಲ್ಲಿ ಕಂಡು ಅನುಭವಿಸಿದ ಯಾತನೆಯನ್ನು ಅವರು ತಮ್ಮ ಕಾವ್ಯದಲ್ಲಿ ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ. ಸಮಾಜದಲ್ಲಿ ಹೆಚ್ಚಾಗಿ ಬಳಸುವ ಎರಡು ಧಾನ್ಯಗಳಾದ ಭತ್ತ-ರಾಗಿಗಳನ್ನು ಬ್ರಾಹ್ಮಣ-ಬ್ರಾಹ್ಮಣೇತರ ಪ್ರತಿನಿಧಿ ಮಾಡಿ ಕಾವ್ಯ ರಚಿಸಿದ್ದು, ಸಮಾಜದಲ್ಲಿ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ ಎಂಬುದು ಅವರ ಮನದಾಳದ ಚಿಂತೆಯೇ ಆಗಿದೆ ಎನ್ನುವುದು ಅವರ ವ್ಯಕ್ತಿತ್ವದ ಮಹತ್ವವನ್ನು ತಿಳಿಸುತ್ತದೆ.

ಈ ಅಂಶಗಳನ್ನು ತಮ್ಮಲ್ಲಿ ಹುದುಗಿಸಿಕೊಂಡ ದಾಸರು, ಪುರಾಣಪಾತ್ರಗಳ ಮೂಲಕ ಈ ಅಸಮತೋಲನವನ್ನು ಜಗತ್ತಿಗೆ ಸಾರುವುದು ಮತ್ತು ಜನರಲ್ಲಿ ಆಶಾಭಾವನೆಯ ಅರಿವು ಮೂಡಿಸುವುದು ಪ್ರಮುಖ ಧ್ಯೇಯವಾಗಿಕಂಡಿದೆ. ಪುರಾಣ ಪಾತ್ರಗಳಾದರೆ, ಜನಸಾಮಾನ್ಯರಿಗೆ ಬೇಗ ತಲುಪುತ್ತದೆ ಮತ್ತು ದೀರ್ಘಕಾಲ ಜನಮನದಲ್ಲಿ ಉಳಿಯುತ್ತದೆ ಎಂದು ಭಾವಿಸಿ, ಕಾವ್ಯ ರಚಿಸಿದ್ದಾರೆ. ಈ ಕಾವ್ಯದ ಮೂಲಕ ಸಮಾಜದ ಓರೆಕೋರೆಗಳನ್ನು ತಿದ್ದಬೇಕೆನ್ನುವ ಆಶಯವೆ ಹೊರತು ಅಲ್ಲಿ ಯಾರನ್ನೂ ಕೂಡ ಮನನೋಯಿಸಬೇಕೆಂದು ಅವರು ತಿಳಿದವರಲ್ಲ. ಸಮಾಜದಲ್ಲಿ ಒಂದೇ ತೆರನಾದ ಭಾವನೆಯನ್ನು ಮೂಡಿಸಲು ಅವರು ಸಾಹಿತ್ಯದ ಮೂಲಕ ಪ್ರಯತ್ನಪಟ್ಟರು. ತಾರತಮ್ಯತೆ ತೊಡೆದುಹಾಕಲು ಶ್ರಮಿಸಿದರು ಹಾಗೂ ಮೇಲ್ವರ್ಗದವರನ್ನು ಅವರು ಅಕ್ಷರ ಸಹ ಮನನೋಯಿಸುವುದು ಅವರ ಉದ್ದೇಶವಾಗಿರಲಿಲ್ಲ. ಅದನ್ನು ಅವರು ಇರುವವರೆಗೂ ತಮ್ಮ ಸಾಹಿತ್ಯದಲ್ಲಿ ಚಾಚೂತಪ್ಪದೇ ಪಾಲಿಸಿಕೊಂಡು ಬಂದಿದ್ದಾರೆನ್ನುವುದು ಒಂದು ಮಹತ್ವದ ಸಂಗತಿಯಾಗಿದೆ. "ಒರಟುತನ, ನಿಷ್ಕಪಟ್ಯ, ತತ್ವನಿಷ್ಠೆ, ಶ್ರದ್ಧೆ, ಉತ್ಸಾಹಗಲು ಅವರನ ಪ್ರವೃತ್ತಿ ಜಾಯಮಾನಗಳಿಗೆ ಪೋಷಕವಾಗಿರುವ ದ್ರವ್ಯವಿಶೇಷಗಳು. ಆದ್ದರಿಂದ ಅವರ ವಿಡಂಬನೆಯಲ್ಲಿ ಕಹಿಯಿದೆ, ವಿಷವಿಲ್ಲ; ಮೊನಚಿದೆ, ನೋವಿಲ್ಲ ; ಹಠವಿದೆ, ದ್ವೇಷವಿಲ್ಲ,

ಕಾವಿದೆ ತಾಪವಿಲ್ಲ, ಕೋಪವಿದೆ, ವೈರವಿಲ್ಲ; ಚುರುಕಿದೆ ಉರಿಯಿಲ್ಲ; ಎಲ್ಲಿಯೂ ಬ್ರಹ್ಮಶಿವ ವೃತ್ತವಿಲಾಸದ ಮತಾಂಧತೆಯ ದೋಷಲೇಪವಿಲ್ಲ. ಕರ್ತವ್ಯ ಪ್ರಜ್ಞೆ, ಸತ್ಯನಿಷ್ಠೆ, ಲೋಕ ಕಾರುಣ್ಯ, ನೈತಿಕ ಶ್ರದ್ಧೆ, ಮೈಲಾಗಿ ಧರ್ಮ ಕೋಪ - ಇವು ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿಗಳು (ಕನಕದರ್ಶನ ೧೨೧).

ಕಾವ್ಯವನ್ನು ಕುರಿತು ಕನಕದಾಸರು ಪ್ರಾರಂಭದಲ್ಲಿಯೇ ಈ ರೀತಿ ಹೇಳುವುದನ್ನು ಕಾಣಬಹುದು.

ರಾಮಧಾನ್ಯದ ಕೃತಿಯನೀ ಜನ
ಸ್ತೋಮವೆಲ್ಲಾದರಿಸುವಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ.......

ಈ ಮೇಲಿನ ಪದ್ಯದಲ್ಲಿ ಬರುವ **'ಭೂಮಿಗಚ್ಚರಿಯಾಗಿ'** ಎಂಬ ಪ್ರಯೋಗ ಅವರು ಅನುಭವಿಸಿದ ಸಾಮಾಜಿಕ ಅನ್ಯಾಯ ಅವಮಾನಗಳನ್ನು ಸ್ವಸಾಮರ್ಥ್ಯದಿಂದಲೇ ಮೆಟ್ಟಿ ಮೇಲೇರಿ ನಿಂತ ಸೋಜಿಗವನ್ನು ಸೂಚಿಸುತ್ತದೆ. 'ಮಹಕಥೆ' ಎಂಬುದು ಅವರು ಮೇಲು ವರ್ಗ ವರ್ಣ ಜಾತಿಗಳಿಂದ ಅನುಭವಿಸಿದ ಅವಮಾನ ಅವಹೇಳನಗಳ ಮಹಾವ್ಯಥೆಯ ಕತೆ ಎಂಬುದನ್ನು ಸೂಚಿಸುತ್ತದೆ. (ರಾಗಿ ರಾಮಾಯಣದರ್ಶನ ೯೪-೯೫) ಈ ಕಾವ್ಯವನ್ನು ಕುರಿತು ಇದು ಒಂದು 'ಅಣಕು ಮಹಾಕಾವ್ಯ' ಎಂದು ಕರೆಯುತ್ತಾರೆ. ದೇಜಗೌ ಅವರು "ಅಣಕು ವೀರ ಅಥವಾ ಮಹಾಕಾವ್ಯವೆಂಬ ಹೆಸರಿಗೂ ಪಾತ್ರವಾಗಬಲ್ಲ ಲಕ್ಷಣಗಳನ್ನಿದು ಒಳೊಂಡಿದೆಯೆಂದು ಮೇಲು ನೋಟಕ್ಕೇ ತೋರದಿರಲಾರದು. ಮಹಾಕಾವ್ಯದ ಲಕ್ಷಣಗಳನ್ನು ಸಮ ಪ್ರಮಾಣದಲ್ಲಿಲ್ಲದಿದ್ದರೂ ಅರೆ ಪ್ರಮಾಣದಲ್ಲಿ, ಸಮ ರೂಪದಲ್ಲದಿದ್ದರೂ, ಪ್ರತಿರೂಪದಲ್ಲಿ, ಸಮಾನಾಂತರ ವಾಗಲ್ಲದಿದ್ದರೂ ವ್ಯಾಜಾಂತರದಿಂದ ಹೊಂದಿರುವ ಕೃತಿಯೇ ಅಣಕು ಮಹಾಕಾವ್ಯ". (ಕನಕದರ್ಶನ - ೧೨೨)

ಈ ಮೇಲಿನ ಅಭಿಪ್ರಾಯ ಅಂಶಗಳನ್ನು ಹೊಂದಿದ್ದರು ಕೂಡ ಕವಿಯ ಪಾಲಿಗೆ ಮಹಾಕಾವ್ಯವೆ ಆಗಿದೆ. ಅಂದರೆ, ಅವರ ಮನದಲ್ಲಿ ಮಹತ್ತನ್ನು ಸೃಷ್ಟಿಸುತ್ತೇನೆನ್ನುವ ಆಶಯವಿದೆ.

ಈ ಎಲ್ಲ ರೀತಿಯ ವಿಷಯಗಳು ಇದ್ದಾಗ್ಯೂ ಕೂಡ ಕವಿಯ ಮನದಲ್ಲಿ ಏನಿತ್ತು ಆ ವಿಷಯವೇ ಮುಖ್ಯ ಅಂದರೆ, ಇಲ್ಲಿ ಕತೆ ಕಾವ್ಯದಲ್ಲಿ ಹೀಗೆ ಪ್ರಾರಂಭವಾಗುತ್ತದೆ. 'ರಾಮಾಯಣ ಕತೆಯಲ್ಲಿ ರಾಗಿಯ ಕತೆ ಅಡಕವಾಗಿರುವ ಕಾರಣದಿಂದ ರಾಗಿಯ ಪ್ರಾಚೀನತೆ ರಾಮನಿದ್ದ ತ್ರೇತಾಯುಗಕ್ಕೇ ಹೋಗುತ್ತದೆ. ಆ ಕತೆಯನ್ನು ಶಾಂಡಿಲ್ಯ ಮುನಿ

ವನವಾಸದಲ್ಲಿದ್ದ ಪಾಂಡವರಿಗೆ ಹೇಳಿದ ಎಂಬುದರಿಂದ ದ್ವಾಪರ ಯುಗವನ್ನು ಒಳಗೊಳ್ಳುತ್ತದೆ. ಅಂದರೆ, ಕನಕದಾಸರು ತ್ರೇತಾ ದ್ವಾಪರ ಯುಗಗಳ ಭದ್ರವಾದ ಬುನಾದಿಯ ಮೇಲೆ ರಾಗಿ-ರಾಮಾಯಣದ ಸೌಧವನ್ನು ಕಟ್ಟಲು ಯತ್ನಿಸಿದ್ದಾರೆ ಎಂಬುದನ್ನು ಮನಗಾಣಬಹುದು. (ರಾಗಿ - ರಾಮಾಯಣ ೨೫) ಕನಕದಾಸರು ಈ ಕಾವ್ಯ ಬರೆದದ್ದು ಸಮಾಜದಲ್ಲಿ ನೊಂದವರಿಗೆ, ಶೋಷಣೆಗೆ ಒಳಗಾದ ಜನಾಂಗದವರ ಕತೆ ಎಂಬುದಾಗಿ, ಆದರೆ, ಅದಕ್ಕೆ ವಿದ್ವಾಂಸರು ನೊಂದವರೆಲ್ಲಾರ ಆತ್ಮಕಥೆ ಎಂದೂ, ಕನಕದಾಸರ ಆತ್ಮಕಥೆ ಎಂದು ಅಭಿಪ್ರಾಯಿಸಿದ್ದಾರೆ. ಅದು ಏನೇ ಇರಲಿ ಇಲ್ಲಿ ಮೇಲೆ ಹೇಳಿದ ಹಾಗೆ ಕಥೆ ತ್ರೇತಾಯುಗದ್ದು, ಅದನ್ನು ಹೇಳಿದ್ದು ದ್ವಾಪರಯುಗದಲ್ಲಿ. ಈಗ ಅದರ ಬಗೆಗೆ ಅಧ್ಯಯನ ನಡೆಯುತ್ತಿರುವುದರಿಂದ ಕೃತಿಯು ಕಲಿಯುಗಕ್ಕೂ ತನ್ನನ್ನು ಚಾಚಿಕೊಂಡಿದೆ. ಅಂದರೆ, ಸರ್ವಕಾಲಕ್ಕೂ ಸತ್ಯವಾದುದನ್ನೇ ನಿತ್ಯಸತ್ಯ ಎನ್ನುವಂತೆ ಕನಕದಾಸರು ಸಾಹಿತ್ಯ ಜಗತ್ತಿಗೆ ನೀಡಿದ್ದಾರೆ.'

'ಕನಕದಾಸರ ಕಾಲದ ಸಾಮಾಜಿಕ ಪರಿಸ್ಥಿತಿ, ಪರಿಸರ, ಜನಜೀವನ, ಯುದ್ಧಗಳು ಹೀಗೆ ಆಗಿನ ಕಾಲದ ಒಂದು ಒಟ್ಟು ಚಿತ್ರವನ್ನು ಇಲ್ಲಿ ಕಾಣಬಹುದಾಗಿದೆ. ಈ ಎಲ್ಲಕ್ಕಿಂತ ಮಿಗಿಲಾಗಿ, ಶೋಷಿತ ವರ್ಗಕ್ಕೆ ಸೇರಿದ ಮಹಾಚೇತನವೊಂದು ತನ್ನ ವಿಕಸನದ ಹಾದಿಯಲ್ಲಿ ಅನುಭವಿಸಿದ ನೋವಿನ ಕಥೆಯೂ ಇಲ್ಲಿದೆ. ಇಲ್ಲಿನ ರಾಗಿಯ ಒಂದೊಂದು ಮಾತೂ ಈ ದೇಶದ ಪಟ್ಟಭದ್ರ ವ್ಯವಸ್ಥೆಯ ಕೋಟೆಗೆ ಇಟ್ಟ ಕೈಬಾಂಬುಗಳೆನಿಸುತ್ತದೆ. ಇದಕ್ಕೂ ಮಿಗಿಲಾಗಿ ಈ ಹೊತ್ತಿಗೆ ಇಂತಹ ಸಮಸ್ಯೆಗಳನ್ನು ಎದುರಿಸುತ್ತಿರುವ ಜನರಿಗೆ ಈ ಮಾತುಗಳು ಆತ್ಮಸ್ಥೈರ್ಯ ನೀಡುತ್ತದೆ. ವಿದ್ವತ್ತು ಪ್ರತಿಭೆ, ಅರ್ಹತೆಗಳೆಲ್ಲ ತಮ್ಮ ಸ್ವತ್ತು ಎಂದು ತಿಳಿದ ಜನರ ಕುತಂತ್ರದ ಬಿಸಿ ಕವಿಗೆ ಹೆಜ್ಜೆ ಹೆಜ್ಜೆಗೂ ಚುಚ್ಚಿ ನೋಯಿಸಿರಬೇಕು. ಇದರಿಂದ ಮನನೊಂದ ಕನಕದಾಸರು ಈ ಜನರೊಂದಿಗೆ ಬೀದಿ ಜಗಳಕ್ಕಿಳಿಯಬೇಕಾದ ಪರಿಸ್ಥಿತಿಯಲ್ಲಿಯೂ ಕಾವ್ಯಮಾಧ್ಯಮದ ಮೂಲಕ ಉತ್ತರಿಸಿರುವುದು ಅವರ ಹೃದಯದಲ್ಲಿ ಎಳವೆಯಿಂದಲೂ ಬೀಜರೂಪದಲ್ಲಿದ್ದ ಸಂತತ್ವ ಪ್ರಭಾವವೆನಿಸುತ್ತದೆ'. (ಕನಕ ಸಾಹಿತ್ಯ ದರ್ಶನ ಭಾಗ -೧, ಪುಟ ೫೬೯)

ಇಷ್ಟೆಲ್ಲಾ ಅಂಶಗಳನ್ನು ರಾಮಧಾನ್ಯ ಚರಿತೆಯ ಸಾಮಾಜಿಕ ಅಂಶಗಳಲ್ಲಿ ಚರ್ಚಿಸಿದ್ದಾಯಿತು. ಅಂದರೆ, ಇನ್ನು ಮುಂದೆ ಈ ಕೃತಿಯ ಪೌರಾಣಿಕ ಅಂಶಗಳನ್ನು ಚರ್ಚಿಸಲು ಸಾಧ್ಯ.

ಇಲ್ಲಿ ಕಾವ್ಯ ಪ್ರಾರಂಭವಾಗುವುದೇ ದೇವತಾಸ್ತುತಿಯ ಮೂಲಕ, ನಂತರವೇ ಮಹಾಕಥೆಯನ್ನು 'ಭೂಮಿಗಚ್ಚರಿ'ಯಾಗಿ ಹೇಳುತ್ತೇನೆ ಎನ್ನುವ ದಾಸರು ಕಾವ್ಯ ವಸ್ತು ಮತ್ತು ಮಹತ್ವವನ್ನು ತಿಳಿಸುತ್ತಾರೆ. ಇಲ್ಲಿ ಧರೆಯನ್ನು ಜೂಜಿನಲ್ಲಿ ಕಳೆದುಕೊಂಡು ಶೋಷಣೆಗೆ ಒಳಗಾಗಿರುವವನು ಧರ್ಮನಂದನ ಮತ್ತು ಸಹೋದರರು ಕಾಮ್ಯಕವನದಲ್ಲಿ ವನವಾಸದಲ್ಲಿರುತ್ತಾರೆ. ಒಂದು ದಿನ ಶಾಂಡಿಲ್ಯಮುನಿ ತಪಸ್ವಿಗಳೊಡನೆ ಆಗಮಿಸುತ್ತಾನೆ. ಪಾಂಡವರು ಆತನ ಕಾಲಿಗೆರಗಿದರು. ಆಗ ಮುನಿಶ್ರೇಷ್ಠರಾದ ಶಾಂಡಿಲ್ಯರು 'ಶ್ರೀಮಂತಿಕೆಯಾಗಲಿ, ಬಡತನವಾಗಲಿ ಸ್ಥಿರವಲ್ಲ, ಪರಿಹಾರವಾಗುತ್ತದೆ ಅರಸ ಕೇಳೆಂದ' ಅವರ ಮನಕ್ಲೇಶ ಪರಿಹಾರಕ್ಕಾಗಿ ರಾಮಾಯಣ ಕಥೆ ಹೇಳುತ್ತಾನೆ. ರಾಮಾಯಣ ಕಥೆಯ ಮೂಲಕ ಸಮಾಜದಲ್ಲಿ ಶೋಷಣೆಗೆ ಒಳಗಾದವರ ಚಿತ್ರಣವನ್ನು ರಾಗಿ-ಭತ್ತ ಪ್ರಸಂಗವನ್ನು ಹೇಳುತ್ತಾನೆ. ಅಂದರೆ, ಮೊದಲಿಗೆ ಗಮನಿಸಬೇಕಾದ ಅಂಶ ಎಂದರೆ ಕತೆ ವಸ್ತುವಿನಲ್ಲಿ ಶೋಷಿತರು ಇದ್ದಾರೆ, ಕೇಳುತ್ತಿರುವವರು ಕೂಡ ಶೋಷಣೆಗೆ ಒಳಗಾದವರು ಪಾಂಡವರು. ಅಂದರೆ, ಕಾವ್ಯ ಪ್ರಾರಂಭವಾದಲ್ಲಿಯೇ ಕಾವ್ಯದಲ್ಲಿ ಮುಂದೆ ಚರ್ಚಿತವಾಗುವ ವಿಷಯವನ್ನು ಓದುಗರ ಗಮನಕ್ಕೆ ತರುವುದು ಕವಿಯ ಉದ್ದೇಶವಾಗಿದೆ.

ಕನಕದಾಸರು ಅಂದಿನ ಸಮಾಜದಲ್ಲಿನ ಓರೆಕೋರೆಗಳನ್ನು ಕಂಡಿದ್ದು, ಅವರು ದಾಸರಾದನಂತರವೆ. ಅಂದರೆ ಅವರು ನಾಯಕ ಪದವಿಯಲ್ಲಿದ್ದಾಗ ಈ ಸಮಾಜಿಕ ಓರೆ-ಕೋರೆಗಳು ಗಮನಕ್ಕೆ ಬಂದಿರಲಿಲ್ಲವೇ? ಬಂದಿದ್ದರೆ ಅವರು ದಾಸಪೂರ್ವ ಜೀವನದ ಬಗೆಗೆ ಹೇಳುವಲ್ಲಿ ವಿಫಲರಾದರೇಕೆ? ಈ ಅಂಶಗಳು ಎಲ್ಲಿಯೂ ಮತ್ತು ಯಾವ ವಿದ್ವಾಂಸರ ಗಮನಕ್ಕೆ ಬರಲಿಲ್ಲ. ಕಾರಣ ಕನಕದಾಸರು ಅವರ ವೈಯಕ್ತಿಕ ವಿವರಗಳನ್ನು ಯಾವ ಸಾಹಿತ್ಯ ಕೃತಿಯಲ್ಲಿಯೂ ದಾಖಲಿಸಿಲ್ಲ. ಈಗ ಅಲ್ಪ ಸ್ವಲ್ಪ ಸಾಹಿತ್ಯ ವಿಷಯಗಳನ್ನು ಕ್ರೋಢೀಕರಿಸಿ, ದಾಸಸಾಹಿತ್ಯದ ಆಧಾರದಿಂದ ಮತ್ತು ಅಂದಿನ ದಿನಗಳ ಇತಿಹಾಸದ ಮೂಲಕ ಕನಕದಾಸರ ಸಾಂಸ್ಕೃತಿಕ ಜೀವನ ಚರಿತ್ರೆಯನ್ನು ಕಟ್ಟಿದ್ದಾರೆ. ಈ ಚರಿತ್ರೆ ರಸವತ್ತಾಗಲು ಜನಪದರಲ್ಲಿದ್ದ ಪವಾಡ ಸದೃಶ್ಯ ಘಟನೆಗಳು ಈ ಅಂಶಗಳ ಆಧಾರದಿಂದಲೇ ಕನಕದಾಸರ ಚರಿತ್ರೆ ರೂಪುಗೊಂಡಿದೆ. ಕನಕದಾಸರು ಯುದ್ಧರಂಗದಿಂದ ಬದುಕಿ ದಾಸರಾಗುತ್ತಾರೆ. ಅದುವೇ ಕೇಶವನ ಅಣತಿಯಂತೆ. ಅನಂತರ ಅವರು ಹಲವಾರು ಕ್ಷೇತ್ರದರ್ಶನ ಮಾಡಿ, ಅಧ್ಯಾತ್ಮನೆಲೆಯಲ್ಲಿ ಬದುಕನ್ನು ಮುಂದುವರೆಸುತ್ತಾರೆ. ಆಗ ದಾಸರಿಗೆ ಮನವರಿಕೆಯಾಗುವುದು ಬೋಗ ಜೀವನ ವ್ಯರ್ಥ, ಭಕ್ತಿಜೀವನ ಶ್ರೇಷ್ಠ ಎಂಬುದನ್ನು ಮನಗಂಡ ನಂತರ ಅವರು ಅನನ್ಯ ಹರಿಭಕ್ತನಾಗಿ ಬದುಕುತ್ತಾರೆ. ಅದೇ ರೀತಿ ಭಕ್ತಿಸಾಹಿತ್ಯದಲ್ಲಿ ತೊಡಗುತ್ತಾರೆ.

ಈ ಎಲ್ಲಾ ಅಂಶಗಳನ್ನು ದಾಸರ ಬಗೆಗೆ ಗೌರವ-ಪೂಜ್ಯಭಾವನೆಯಿಂದಲೇ ಗಮನಿಸಬಹುದು. ನಾಯಕೋತ್ತರ ಕಾಲದಲ್ಲಿ ಅವರು ಅನುಭವಿಸುವ ಎಲ್ಲಾ ಯಾತನೆಗಳಿಗೆ ಮತ್ತು ಸಮಾಜದ ತಾರತಮ್ಯಗಳನ್ನು ತಮ್ಮ ಸಾಹಿತ್ಯದಲ್ಲಿ ಸೆರೆಹಿಡಿದರು. ಆದರೂ ದಾಸರ ಸಮಾಜೋಧಾರ್ಮಿಕ ಅಸಮಾನತೆಯನ್ನು ರಾಗಿ-ಭತ್ತದ ಮೂಲಕ ರಾಮಧಾನ್ಯ ಚರಿತೆಯಲ್ಲಿ ಕಾಣಬಹುದು. ಈ ಕೃತಿ ದೌರ್ಜನ್ಯದ ನಡವಳಿಕೆಗಿಂದ ಮಾನವರೊಳಗಿನ ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸುವಲ್ಲಿ ಹಾಗೂ ಅಸಹಾಯಕ ಜನಸಾಮಾನ್ಯರ ಆಧಾರವಾಗಿ ಮತ್ತು ಸಮಾಜದಲ್ಲಿ ಸಹಬಾಳ್ವೆಯ ಮೂಲಮಂತ್ರವಾಗಬೇಕು ಎನ್ನುವುದೇ ಕೃತಿಯ ಆಶಯ".

'ಈ ಕಾವ್ಯಪುರಾಣ ಪ್ರತಿಮೆಗಳ ಮೂಲಕ, ಅಲ್ಲಿ ಜನಮನ್ನಣೆಗಿಂತ ವಿಷಯವನ್ನು ಸಮಾಜಕ್ಕೆ ತಲುಪಿಸುವಲ್ಲಿ ಹಾಗೂ ತಾರತಮ್ಯಭಾವನೆಯನ್ನು ವಿರೋಧಿಸುವುದು ಎಂದರೆ, ಅತಿಶಯೋಕ್ತಿಯಾಗಲಾರದು'. ದಾಸರು ಕಥೆಯನ್ನು ಸಂಗ್ರಹರೂಪದಲ್ಲಿ ಹೇಳಿ ರಾಗಿ ಭತ್ತದ ಪ್ರಸಂಗಕ್ಕೆ ಬಂದಾಗ ನಾಟಕೀಯವಾಗಿ ಚಿತ್ರಿಸುತ್ತಾರೆ. ಈವರೆಗೆ ಸಾಹಿತ್ಯದಲ್ಲಿ ಪ್ರಾಣಿಗಳು ಪಾತ್ರಗಳಾಗಿದ್ದವು. ಆದರೆ ಈ ಕೃತಿಯಲ್ಲಿ ಧಾನ್ಯಗಳು ಪಾತ್ರಗಳಾಗಿದ್ದು ವಿಶೇಷವಾದದ್ದು. ರಾಮ ರಾವಣರ ನಡುವೆ ಯುದ್ಧವಾಗಿ, ನಂತರ ಸೀತೆಯೊಂದಿಗೆ ಅಯೋಧ್ಯೆಗೆ ಬರುವ ಮಾರ್ಗದಲ್ಲಿ ಅಲ್ಲಲ್ಲಿ ಗೋಚರಿಸುವ ಸ್ಥಳಗಳನ್ನು ಸೀತೆಗೆ ವಿವರಿಸುತ್ತಾ ಬರುತ್ತಾನೆ. ಮಾರ್ಗಮಧ್ಯದಲ್ಲಿ ವಾಲ್ಮೀಕಿಯಾಶ್ರಮವಿದ್ದುದರಿಂದ ಅಲ್ಲಿಗೆ ಬರುತ್ತಾನೆ. ಶ್ರೀರಾಮ ಬರುವ ವಾರ್ತೆ ತಿಳಿದು ಮುನಿಶ್ರೇಷ್ಠರೆಲ್ಲಾ ಅಲ್ಲಿ ಸೇರುತ್ತಾರೆ. ರಾಮನು ಅವರೆಲ್ಲರಿಂದ ಆಶೀರ್ವದಿತನಾಗುತ್ತಾನೆ. ಮುನಿಗಳೆಲ್ಲಾ ಶ್ರೀರಾಮನ ದರ್ಶನ ಪಡೆಯುತ್ತಾರೆ. ಅಲ್ಲಿ ನೆರೆದವರಿಗೆಲ್ಲಾ "ನವಧಾನ್ಯಗಳಿಂದ ತಯಾರಿಸಿದ ಭಕ್ಷ್ಯಗಳನ್ನು ಬಡಿಸಿದವನು ಗೌತಮ ಋಷಿ; ಉಂಡವರು ಶ್ರೀರಾಮನೊಡಗೂಡಿದ ವಾನರ - ದೈತ್ಯಪ್ರಮುಖರು ; ರುಚಿಯರಿತು ಧಾನ್ಯಗಳನ್ನು ನೋಡಬೇಕೆಂದವನು ಹನುಮಂತ ; ನರೆದಲೆಗನ ಮಹಿಮೆಯನ್ನು ಘೋಷಿಸಿದವನು ಗೌತಮ ಮುನಿ ; ಕೊನೆಗೆ ಅದನ್ನು ಸಂಸ್ಥಾಪಿಸಿದವನು ದೇವೇಂದ್ರ ; ಅದರ ಹಿರಿಮೆಗೆ ಮೆಚ್ಚಿ ತಂತಮ್ಮ ಶಕ್ತಿಯನ್ನು ಧಾರೆ ಎರೆದವರು ಸ್ವರ್ಗದೇವತೆಗಳು ; ತನ್ನ ಮತ್ತು ಅದರ ಅನನ್ಯತೆಯನ್ನು ಪ್ರದರ್ಶಿಸಲೆನ್ನುವಂತೆ ತನ್ನ ಹೆಸರನ್ನೇ ಅದಕ್ಕೆ ದಯಪಾಲಿಸಿದವನು ಶ್ರೀರಾಮ". (ಕನಕದರ್ಶನ - ೧೨೧)

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಅಲ್ಲಿ ಯಾವುದೇ ರೀತಿಯ ವಾದ-ವಿವಾದ ಕಂಡು ಬರಲಾರದು. ಆದರೆ ಇಷ್ಟರಲ್ಲಿಯೇ ಆದದ್ದು ವಿವಾದ. ಗೌತಮ ಮುನಿಯಾಶ್ರಮದಲ್ಲಿ ರುಚಿಕರವಾದ ಭಕ್ಷಗಳನ್ನು ಸವಿದ ನಂತರ.

**ಶ್ರೀರಾಮ** - ಅನಿಲಸುತ ಬಾರೆಂದು ಕರೆದು ಭಕ್ಷಪದಾರ್ಥಗಳು ರಚಿಯನ್ನರುಹು ಎನ್ನಲು

**ಹನುಮಂತ** - ಧಾನ್ಯದ ತನುವನೀಕ್ಷಿಸಬೇಕು ದೇವರೆ ತರಿಸಿ ನೀವೆಂದ.

ಆಗ ಅಲ್ಲಿ ನೆರೆದಿದ್ದ ಮುನಿಶಿಷ್ಯರೆಲ್ಲಾರು ಭಕ್ಷಪದಾರ್ಥಗಳಿಗೆ ಉಪಯೋಗಿಸಿದ ಧಾನ್ಯಗಳನ್ನು ತಂದು ಸಾಲಾಗಿ ಜೋಡಿಸಲಾಯಿತು.

**ಶ್ರೀರಾಮ** - ಮುನಿಗಳೆಲ್ಲಾರ ಕಡೆನೋಡಿ 'ಶ್ರೇಷ್ಠವಾದ ಧಾನ್ಯಯಾವುದು ಎನ್ನಲು'

**ಮುನಿಗಳು** - ಕೆಲವರು ಗೋಧಿ, ಕೆಲವರು ಸಾಮೆ, ಕೆಲವರು ನವಣೆ, ಕೆಲವರು ಕಂಬು, ಕೆಲವರು ಜೋಳ, ಕೆಲವರು ಹಾರಕ, ಕೆಲವರು ನೆಲ್ಲಿನ ಬಗೆಗೆ, ಮತ್ತೆ ಕೆಲವರು ರಾಗಿಯ ಬಗೆಗೆ ಹೇಳಿದಾಗ -

**ಶ್ರೀರಾಮ** - ಹಲವು ಭಿನ್ನ ವಿಚಾರಗಳೇಕೆ ಒಂದನ್ನೇ ಹೇಳಿರಿ ಎಂದಾಗ

**ಗೌತಮ ಮುನಿ** - ನಮ್ಮಯದೇಶಕೆ ರಾಗಿಯೇ ಶ್ರೇಷ್ಠವಾದುದು ಎಂದನು.

ಈ ಮಾತನ್ನು ಸಭೆಯಲ್ಲಿ ಕೇಳಿದ ಅಲ್ಲಿಯೇ ಇದ್ದ 'ವ್ರೀಹಿ'ಯು ಗೌತಮ ಮುನಿಗಳ ಕಡೆ ತಿರುಗಿ

**ವ್ರೀಹಿ** - ಅಬ್ಬಾ! ಒಳ್ಳೆಯದನ್ನೇ ಹೇಳಿದಿರಿ ; ಶಿವ ಶಿವಾ ನಿಮ್ಮಂಥವರೇ ಈ ರೀತಿಯಾಗಿ ಪಕ್ಷಪಾತ ಮಾಡುವುದೇ?
ನರೆದಲೆಗನ ಕಡೆ ತಿರುಗಿ

**ವ್ರೀಹಿ** - ಏನೆಲವೊ ನರೆದಲೆಗ ನೀನು ನನಗೆ ಸಮಾನವೇ?
ಆ ದೇವರಿಗೆ ಗೊತ್ತು ನಮ್ಮಿಬ್ಬರಲ್ಲಿ ಶ್ರೇಷ್ಠರಾರೆಂದು
ಆ ರಾಮದೇವರೆದುರಿಗೆ ನಿನ್ನ ಪ್ರತಿಷ್ಠೆ ಸುಡಲಿ
ಕುಲಹೀನ ನೀನು, ಬುದ್ಧಿ ಇಲ್ಲದವನು

**ವ್ರೀಹಿ** - ಲೋಕದಲ್ಲಿ ನೀನು ಉಪಯೋಗವಿಲ್ಲದ ಆಹಾರವೆಂದು ಶೂರರು, ಸಮರ್ಥರು, ಬುದ್ಧಿವಂತರು ನಿರಾಕರಿಸಲಾಗಿ ನೀನು ಶೂದ್ರಾನ್ನವಾದೆ.
ನಿನ್ನನ್ನು ಯಾರು ಮೆಚ್ಚರು, ಇದಕ್ಕೆ ದೇವತೆಗಳೇ ಸಾಕ್ಷಿ
ನೀನಾವ ಮಾನ್ಯ, ಅಶುಭ, ಅಯೋಗ್ಯ, ಭ್ರಷ್ಟ ಎಂದು ಹಂಗಿಸಿತು.

**ವ್ರೀಹಿ** - "ರಾಜರಿಗೆ
ಶಿಶುಗಳಿಗೆ
ಬ್ರಹ್ಮನಿಗೆ
ಭೂಸುರರಿಗೆ
ಪುಣ್ಯಕ್ಕೆ

ಶಾಸ್ತ್ರಕ್ಕೆ

ಗಂಧಾಕ್ಷತೆಗೆ

ಮಂತ್ರ-ತಂತ್ರಕ್ಕೆ

ಅಕ್ಷತೆಗೆ

ಮಂಗಳಕ್ಕೆ

ಸಿರಿ-ಸಂಪತ್ತಿಗೆ - ನಾನು (....... ತನ್ನತಾವು - ಅ೭) "

| | | |
|---|---|---|
| ವ್ರೀಹಿ | | (ನರೆದಲೆಗ) |
| ನಾನು | | |
| ಚಂದನ ಸಮಾನ | X | ಕಟ್ಟಿಗೆ ಸಮಾನ |
| ಗೋಹಾಲು | | ಕುರಿಹಾಲು |
| ಹನುಮ | | ಕಪಿ |
| ಸುರನದಿ | | ಹಳ್ಳ |
| ಗರುಡ | | ಹದ್ದು |
| ಹಂಸ | | ಬಕ |
| ಕೋಗಿಲೆ | | ಕಾಗೆ (ತನ್ನ ತಾವು ಅ೭) |

ಈ ಎಲ್ಲ ಮಾತುಗಳಾಗುವವರೆಗೂ ಸುಮ್ಮನಿದ್ದ ನರೆದಲಗನು ಆತ್ಮಾಭಿಮಾನದಿಂದ ಕನಲಿ, ಕೋಪದಿಂದ ಭತ್ತದ ಕಡೆಗೆ ತಿರುಗಿ

ನರೆದಲೆಗ - ಭಂಡ

ಕಡುಜಡ

ಸತ್ವಹೀನ

ಬಡವರ ವಿರೋಧಿ

ಪತ್ಯಾನ್ನ

ಹೆಣದ ತುತ್ತು

ನಿರರ್ಥಕ

ಸೇವಕ

ದುರಾತ್ಮ

ಹುಲುಧಾನ್ಯ

ನಿರ್ದಯಿ
ಮಧುಪಾನ
ದುರ್ಮತಿಗೇಡಿ
ನಪುಂಸಕ (ತನ್ನತಾವು ೮೭)

ಇಲ್ಲಿ ಕನಕದಾಸರು ರಾಗಿಯ ಮೂಲಕ ಧರ್ಮಯುದ್ಧವನ್ನೇ ಮಾಡಲು ಹೊರಟಂತಿದೆ. "ಕುಂತರೆ ಕುರುಬ ನಿಂತರೆ ಕಿರುಬ" ಎಂಬ ಗಾದೆ ಮಾತೊಂದಿದೆ. ಅದರ ಅರ್ಥ ಸಹನೆ ಇರುವವರಿಗೂ ಸೌಮ್ಯತೆಯ ಕುರುಬ, ಸಹನೆ ಮೀರಿದರೆ, ರೌದ್ರತೆಯ ಕಿರುಬ ಎಂದು. ಇಲ್ಲಿ ಕುರುಬ ಕನಕ, ಕಿರುಬನಂತೆ ಮೇಲ್ಬೀಳುವುದನ್ನು ಕಾಣಬಹುದು. ನರೆದಲೆಗನ ಮಾತು "ಸಿಡಿಲಗರ್ಜನೆಯಂತಿತ್ತು" (ರಾಗಿ - ರಾಮಾಯಣ - ೩೩) ಕನಕದಾಸರು ತಾವು ಬದುಕಿದ ಕಾಲಘಟ್ಟದಲ್ಲಿ ಸಮಾನತೆಗಾಗಿ, ಧಾರ್ಮಿಕ ಸ್ವಾವಲಂಬನೆಗಾಗಿ ಮನ ನೊಂದ ದಾಸರು "ಈ ಥರದ ಮಾತುಗಳು ಆ ಸಂದರ್ಭಕ್ಕೆ ಶೂನ್ಯವನ್ನು ಕುರಿತು ಆಡಿದಂತೆ ಆಗುತ್ತದೆ. ಇರುವ ಅವಕಾಶಗಳು ಮತ್ತು ಆದ್ಯತೆಗಳನ್ನು ಅವಲಂಬಿಸಿಯೆ ಮತ್ತೊಂದು ವ್ಯವಸ್ಥೆ ಮರುಹುಟ್ಟು ಪಡೆಯಬೇಕಾಗುತ್ತದೆಯೆ ಹೊರತು ಇಲ್ಲದವುಗಳಿಂದಲ್ಲ. ಕನಕದಾಸರ ಸಂದರ್ಭದಲ್ಲಿ ಕೂಡ ಉತ್ತಮ ಬದುಕು ಅಥವ ಪರ್ಯಾಯವೆಂದರೆ, ಉತ್ತಮ ಧರ್ಮವೆ ಆಗಿತ್ತು. ಆ ಕಾರಣವಾಯಿಯೇ ಅವರು ಧಾರ್ಮಿಕ ಸಮಾನತೆ, ಕುಲಶ್ರೇಶ್ಠತೆ, ಮತಿಶ್ರೇಷ್ಠತೆ, ಕುಲಮಾನ್ಯತೆ ಹಾಗೂ ಸ್ವೀಕೃತ ಕುಲಶೋಧನೆಯಲ್ಲಿ ತೊಡಗಿದರು. ಆದಿಕೇಶವನ ಭಕ್ತರಾದವರಿಗೆ ಯಾವ ಕುಲವೂ ಇಲ್ಲ. ಆದಿಕೇಶವನೆ ಎಲ್ಲ ಎಂಬ ಮಾತುಗಳನ್ನಾಡಿದರು. ರಾಮಧಾನ್ಯಚರಿತೆಯಾಗಲಿ ಅವರ ಕೀರ್ತನೆಗಳಲ್ಲಾಗಲಿ ಬ್ರಾಹ್ಮಣರನ್ನು ಅವರು ಭೂಸುರರು ಎಂದೇ ಕರೆಯುತ್ತಾರೆ" (ತನ್ನ ತಾವು - ೮೮).

**ನರೆದಲೆಗ -** ಏನು, ನೀವೆಲ್ಲ ಹಿರಿ-ಕಿರಿದೆನ್ನದೆ ಮೌನತಾಳಿದಿರಿ?
ಮುರಿದಾಡುವ ವಿರಸಕಂಡು ಸುಮ್ಮನಾಗಿರುವಿರಿ?
ಇದನ್ನು ನಿರ್ಣಯಿಸುವುದು ನಿಮಗೆ ಸಾಧ್ಯವಿಲ್ಲವೆ?
ಈ ಸತ್ವಹೀನನಲಿ ಸದಾ ವ್ಯರ್ಥವಾಗಿ ವಾದಿಸುವುದಕ್ಕಿಂತ
ನಮಗೆ ಯಾವ ಬುದ್ದಿಯನ್ನು ಹೇಳುವಿರೋ ಹೇಳಿರಿ.

**ಶ್ರೀರಾಮ -** ಇರ್ವರ ಮಾತ್ಸರ್ಯವನ್ನು ಕಂಡು ಮನದಲ್ಲೆ ನಸುನಕ್ಕು
ಯೋಚಿಸುತ್ತಾ ಮುನಿಗಳ ಕಡೆಗೆ ನೋಡಲು

**ಗೌತಮ -** ಇಲ್ಲಿರುವವರು ಅರಸರು, ಮುನಿಗಳು, ರಾಕ್ಷಸರು, ಕಪಿಗಳು, ನಮಗಷ್ಟೇ ಈ ನ್ಯಾಯ ಪರಿಹರಿಸಲಿಕ್ಕೆ ಆಗುವುದಿಲ್ಲ.
ಹರಿ-ಹರ ಬ್ರಹ್ಮಾದಿಗಳೆಲ್ಲಾರನ್ನು ಅಯೋಧ್ಯೆಗೆ ಕರೆಸುವೆವು ಆಗ ಅವರು ಗುಣಾವಗುಣಗಳನ್ನು ಕಂಡು ನಿರ್ಣಯ ಹೇಳುವರು ಎಂದಾಗ

**ಶ್ರೀರಾಮ -** ನಸುನಗುತ ಹೀಗೆ ಹೇಳಿದ. ಶ್ರೇಷ್ಠರಾದ ಇರ್ವರನ್ನು ಸೆರೆಗೆ ಹಾಕಿ, ಆಗ ಹಿರಿದು - ಕಿರಿದು ಎಂಬ ಪೌರುಷ ತಿಳಿಯಬಹುದು ಎಂದನು.

ಆಗ ಅಲ್ಲಿದ್ದವವು ಅದೇ ಸರಿ ಎಂದರು. ಆಗ ಅಯೋಧ್ಯಾಭಿಮುಖವಾಗಿ ಪ್ರಯಾಣ ಬೆಳೆಸಲು ತಿಳಿಸಿದರು.

**ನರೆದಲಗ -** ಅಯ್ಯೋ! ದೇವರೆ ನಮ್ಮನ್ನು ಸೆರೆಗೆ ಹಾಕಿ ತಾವು ಸಂಪತ್ತಿನಲ್ಲಿ, ರಾಜ್ಯಭಾರದಲ್ಲಿ ನಮ್ಮನ್ನು ಮರೆತರೆ, ನಿಮ್ಮ ಕರುಣೆ ಇಲ್ಲದೆ ನಮ್ಮನ್ನು ರಕ್ಷಿಸುವವರಾರು?
ಅಪಕೀರ್ತಿಯೆಂಬ ಸ್ತ್ರೀಯ ಸೆರಗನ್ನು ಹಿಡಿಯುವುದೇ ಲೇಸಾದಂತೆ ಆಯಿತು ನಮ್ಮಗತಿ. ತಾವು ರಕ್ಷಿಸಬೇಕು ಎಂದು ರಾಗಿ ತಲೆತಗ್ಗಿಸಿ ಕೈಮುಗಿಯಿತು.

**ಶ್ರೀ ರಾಮ -** ಅದಕ್ಕೇಕೆ ಚಿಂತಿಸುವಿರಿ ಎಂದು ಹೇಳಿ, ಅವರನ್ನು ಗೌತಮ ಮುನಿಯ ವಶಕ್ಕೆ ಬಿಟ್ಟರು.
ಅನಂತರ ಅಲ್ಲಿಂದ ಪ್ರಯಾಣ ಸಾಗಿತು.

"ಈ ಸನ್ನಿವೇಶ ನಿರ್ಮಾಣ ತುಂಬ ಅರ್ಥವತ್ತಾಗಿದೆ. ಹಿರಿದು ಕಿರಿದು ಎಂಬ ಇವರ ಪೌರುಷ ಗೊತ್ತಾಗುತ್ತದೆ, ಆರು ತಿಂಗಳು ಹಗೇವಿನಲ್ಲಿದ್ದರೆ" ಎಂಬ ರಾಮನ ಮಾತು ಶ್ರೇಷ್ಠ-ಕನಿಷ್ಠ, ಮೇಲು-ಕೀಳು ನಿರ್ಧಾರವಾಗುವುದು ಹುಟ್ಟಿದ ಜಾತಿಋಣದಿಂದ ಅಲ್ಲ, ಸತ್ವಸಮನ್ವಿತ ಸಾಧನೆ ಸಿದ್ದಿಯ ಸಮದರ್ಶನದ ನೀತಿಗುಣದಿಂದ ಎಂಬುದನ್ನು ಎತ್ತಿ ತೋರಿಸುವುದೇ ಆಗಿದೆ. (ರಾಗಿ - ರಾಮಾಯಣ ೩೭)

"ಇಲ್ಲಿ ಗೌತಮ ಮುನಿಯನ್ನು ಕೇಳಬೇಕು, ಇಲ್ಲಿ ಸಭಾಧ್ಯಕ್ಷರಾದ ಶ್ರೀರಾಮನನ್ನು ತನಗಾದ ಅನ್ಯಾಯ /ಅವಮಾನವನ್ನು ಭಿನ್ನವಿಸಿಕೊಳ್ಳಬೇಕು, ಆದರೆ ಇಲ್ಲಿ ನಡೆದದ್ದೇ ಬೇರೆ, ವ್ರೀಹಿ, ನರೆದಲೆಗನ ಮೇಲೆ ವಾಗ್ದಾಳಿ ನಡೆಸಿದ್ದು ಸರಿಯೆ? ಅದು ಅಲ್ಲದೆ ಇತರ ಧಾನ್ಯಗಳಿರಲು, ನರೆದಲೆಗನನ್ನು ಅವಮಾನಿಸಿದ್ದು ಖಂಡನೀಯವಾದದ್ದು". ನರೆದಲೆಗ ವ್ರೀಹಿಯ ಮೇಲೆ ಕೋಪದಿಂದ ಮಾತಾಡುತ್ತಾನೆಯೆ ವಿನಃ ದ್ವೇಷದಿಂದಲ್ಲ. ಅಂದರೆ, ರಾಜನೆ ಸಭೆಯಲ್ಲಿದ್ದು, ನರೆದಲೆಗನನ್ನು ಅವಮಾನಸಿದ್ದನ್ನು ನೋಡಿದರೆ, ಪ್ರತ್ಯಕ್ಷವಾಗಿಯಲ್ಲದೆ ಹೋದರೂ ಪರೋಕ್ಷವಾಗಿ ರಾಜನೆ ಅವಮಾನ ಮಾಡಿದಂತೆ ಆಗಲಿಲ್ಲವೆ?

"ಕನಕದಾಸರು ಹೋದಲ್ಲೆಲ್ಲಾ ಶೂದ್ರ ಅನ್ನಿಸಿಕೊಂಡಿದ್ದರ ಪ್ರತಿಧ್ವನಿಯೇ ರಾಮಧಾನ್ಯ ಕಥೆಯಲ್ಲಿ ಮಿಡಿದಿದೆ ಎಂಬುದರಲ್ಲಿ ಸಂಶಯವಿಲ್ಲ." 'ವ್ಯಾಸರಾಯರು ಗೌತಮ ಮುನಿಯಾಗಿ, ನರೆದಲೆಗ ಕನಕರಾಗಿ, ಮಠಿಕರು ವ್ರೀಹಿಯಾಗಿ ಈ ಕಾವ್ಯದಲ್ಲಿ ಪ್ರತಿಕ್ರಯಿಸಿದ್ದಾರೆ'. ಈ ಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ರಾಮಾಯಣದ ಕತೆಯೊಳಗೆ ತಂದಿರುವುದರ ಔಚಿತ್ಯದ ಬಗ್ಗೆ ಕೆಲವರಿಗಾದರೂ ಸಂಶಯ ಉಂಟಾಗಬಹುದು. ರಾಮಾಯಣದ ಲೋಪಗಳಿಗೂ ಕವಿ ಇಲ್ಲಿ ಉತ್ತರ ಕೊಡುತ್ತಿದ್ದಾನೆ ಅನ್ನಿಸದಿರದು. ಉದಾಹರಣೆಗೆ - ಶಂಭೂಕನ ತಪಸ್ಸಿನ ಪ್ರಸಂಗವನ್ನು ಗಮನಿಸಬಹುದು. ಶಂಭೂಕ ಶೂದ್ರನಾದುದರಿಂದ ತಪಸ್ಸಿಗೆ ಅರ್ಹನಲ್ಲ ಎಂಬುದು ರಾಮಾಯಣದ ಬ್ರಾಹ್ಮಣರ ವಾದ. ರಾಗಿ ಶೂದ್ರನ್ನವಾದುದರಿಂದ ಲೋಕದಲಧಿಕ ಭೋಜನವಲ್ಲವೆಂಬುದು ಅಕ್ಕಿಯ ವಾದ. 'ಕನಕದಾಸ ಕುರುಬನಾದುದರಿಂದ ಕಾವ್ಯರಚನೆಗೆ ಅರ್ಹನಲ್ಲ, ವ್ಯಾಸರಾಯನಿಂದ ತೀರ್ಥಪಡೆಯಲು ಅರ್ಹನಲ್ಲ ಎಂಬುದು ಮಠಿಕರ ವಾದ. ಈ ಮತೀಯ ಭಾವನೆಗಳಿಗೆ ಮಾರ್ದನಿಯೇ ರಾಮಧಾನ್ಯ ಚರಿತೆ' (ಕ.ಸಾ.ದ ಭಾಗ -೧ ೫೨೨).



"ಸಂಸ್ಕೃತೀಕರಣ ಶ್ರೇಣಿಕರಣ ವ್ಯವಸ್ಥೆಯಲ್ಲಿ ಮೇಲ್ಜಾತಿಯ ದಬ್ಬಾಳಿಕೆಗೆ ಸಿಕ್ಕಿದಂತೆ ಅವಮಾನ ಸಂಕಟಗಳನ್ನು ಅನುಭವಿಸಿದ ಮನಸ್ಸುಗಳು ಅಕ್ಷರದ ಬೆಳಕಿಗೆ ತೆರೆದುಕೊಂಡ ಕಾಲಘಟ್ಟದಲ್ಲಿ ಈ ಸಂಕಟ ಸ್ಥಿತಿಯ ವಿರುದ್ಧ ಹಲವು ರೀತಿಯಲ್ಲಿ ಪ್ರತಿಕ್ರಯಿಸಿವೆ. ಈ ಅವಮಾನದ ಅರಿಮೆಯನ್ನು ದಾಟುವುದಕ್ಕೆ ಹಲವು ಉಪಾಯಗಳನ್ನು ಅನುಸರಿಸಿವೆ. ಅಂಥ ಹಲವು ಉಪಾಯಗಳಲ್ಲಿ ಸಂಸ್ಕೃತೀಕರಣವೂ ಒಂದಾಗಿದೆ. ಸಂಸ್ಕೃತೀಕರಣವೆಂದರೆ, ಶ್ರೇಣಿಕರಣಗೊಂಡ ಸಮಾಜದಲ್ಲಿ ಕೆಳಗಿನ ಮೆಟ್ಟಲಿನಲ್ಲಿರುವವರು ಮೇಲಿನ ಮೆಟ್ಟಿಲನ್ನೇರುವುದಕ್ಕೆ ನಡೆಸುವ ಪ್ರಯತ್ನಗಳು. ಸಾಮಾಜಿಕವಾದ ಅಂತಸ್ತನ್ನು ಪಡೆಯಬೇಕೆಂಬ ಹಂಬಲವು ಹೀಗೆ ಮೇಲೇರಲು ಪ್ರೇರೇಪಿಸುತ್ತದೆ ಈ ಬಗೆಯ ಮೇಲ್ಮುಖ ಚಲನೆಯಲ್ಲಿ ಹರಿಯುವವರ ಮನದೊಳಗಿನ ನಂಬಿಕೆಯಿದ. ತಮ್ಮ ಸಾಂಸ್ಕೃತಿಕ ಲೋಕವು ಕೀಳಾದುದು ಮತ್ತು ಕೇಡುಗಳಿಂದ ತುಂಬಿದುದು; ತಮಗಿಂತ ಮೇಲೆ ಇರುವ

ಸಾಂಸ್ಕೃತಿಕ ಜಗತ್ತು ಉತ್ತಮವಾದುದು ಮತ್ತು ಒಳ್ಳೆಯದು. ಈ ಗ್ರಹಿಕೆಯ ತಳಪಾಯವೆಂದರೆ, ಶ್ರೇಷ್ಠತೆ ಮತ್ತು ಕನಿಷ್ಠತೆಗಳ ಮಾದರಿಗಳನ್ನು ರೂಪಿಸಿ ಹೇರಿರುವವರ ತರ್ಕವನ್ನು ಹೇರಿಸಿಕೊಂಡವರೂ ಒಪ್ಪಿಕೊಂಡಿರುವುದು. ಇಂಥ ಚಲನೆಯು ತಮ್ಮದನ್ನು ನಿರಾಕರಿಸಿಕೊಂಡು ಉಡುವ ಮೊದಲ ಹೆಜ್ಜೆಯಿಂದ ಶುರುವಾಗಿ ಅನ್ಯರದ್ದನ್ನು ಒಪ್ಪಿಕೊಳ್ಳಲು ಇನ್ನೊಂದು ಹೆಜ್ಜೆಗೆ ಬಂದು ನಿಂತುಬಿಡುತ್ತದೆ. ಯಾವತ್ತೂ ಸಂಸ್ಕೃತೀಕರಣದ ದಾರಿಯನ್ನಾಯ್ದುಕೊಳ್ಳುವುದೆಂದರೆ, ಮುಂದೆ ಹೆಜ್ಜೆಗಳನ್ನಿಡಲು ಸರಿಯಾದ ಜಾಗ ಸಿಗದೆ, ಎರಡನೇ ಹೆಜ್ಜೆಗೆ ನಿಂತುಬಿಡುವುದು. ತಾವು ಏನಾಗಬಯಸಿದ್ದರೂ ಹಾಗಾಗಲು ಆಗದೆ, ಹಿಂದಕ್ಕೆ ಮರಳಲಾಗದೆ, ಎರನೇ ದರ್ಜೆಯಲ್ಲಿಯೇ ಉಳಿದು ಪರಿಭವ ಅನುಭವಿಸುವ ಸ್ಥಿತಿಯೊದಗಿ ಬಿಡುವುದು ಅಥವಾ ತಾವು ಬಯಸಿದಂತೆ ಆಗಿಬಿಟ್ಟಿದ್ದೇವೆಂದು ಭ್ರಮೆಯಲ್ಲಿ ಉಳಿದುಬಿಡುವುದು. ಕನಕದಾಸ ಇದ್ದಕೆ ಬಹಳ ಒಳ್ಳೆಯ ಉದಾಹರಣೆ.” ಅವನ ಚರಿತ್ರೆಯನ್ನು ನೋಡಿದರೆ, ಸಾಂಸ್ಕೃತಿಕವಾಗಿ ಮೇಲು ಚಲನೆಗೊಳ್ಳಲು ಹರಿಭಕ್ತಿಯ ಹಾದಿಯನ್ನು ಆರಿಸಿಕೊಂಡು ಪಡಬಾರದ ಪಾಡುಗಳನ್ನು ಅನುಭವಿಸಿರುವುದು ಗೊತ್ತಾಗುತ್ತದೆ; “ಇದು ತನ್ನಂತೆ ತಾನು ಉಳಿಯದೆ ಹಾಗೂ ನಿಮ್ಮೊಡನಿದ್ದೂ ನಿಮ್ಮಂತಾಗದೆ ದ್ವಂದ್ವಗಳಲ್ಲೇ ಸಿಲುಕಿ ಬಿಡುವ ಅತಂತ್ರಸ್ಥಿತಿ”. (ಮರದೊಳಗಣ ಕಿಚ್ಚು - ೯೫)

ಚರಿತ್ರೆಯುದ್ದಕ್ಕೂ ಈ ಸಂಸ್ಕೃತೀಕರಣದ ಮೋಹ ಹಲವು ಸಮುದಾಯಗಳನ್ನೂ ಹಾಗೂ ವ್ಯಕ್ತಿತ್ವಗಳನ್ನೂ ಕಾಡಿದೆ. ಯಾವಾಗಲೂ ಸಂಸ್ಕೃತಿಕರಣಗಳು ತಾತ್ಕಾಲಿಕ ಬಿಡುಗಡೆಯ ಕಿರುಚಲನೆಗಳೇ ಹೊರತು ಅಂತಿಮ ವಿಮೋಚನೆ ಅಲ್ಲ. ಕನಕದಾಸರ ಜೀವನ-ವಿವರಗಳನ್ನು ಗಮನಿಸಿದರೆ, ಮೇಲಿನ ಎಲ್ಲ ಮಾತುಗಳು ಸತ್ಯ ಮನವರಿಕೆಯಾಗುತ್ತದೆ. ದಾಸರ ದಾಸನಾದರೂ ಕನಕದಾಸನಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ಸಿಗಲಿಲ್ಲ. ಪ್ರತಿಭೆ ಪಾಂಡಿತ್ಯಗಳಿದ್ದೂ ಕೋಣಮಂತ್ರ ದೀಕ್ಷೆಯ ಅವಮಾನಕ್ಕೆ ಒಳಗಾಗುವುದು ತಪ್ಪಲಿಲ್ಲ. “ಭಾಗವತರಾದರೂ ಬ್ರಾಹ್ಮರಾಗಲಿಲ್ಲ, ಮತಾಚಾರ್ಯರ ಅನುಗ್ರಹ ಪಡೆದರೂ ಮತಾನುಯಾಯಿಯಾಗಲಿಲ್ಲ. ಕನಕನಕಿಂಡಿ ಮತ್ತು ಕೋಣಮಂತ್ರ ದೀಕ್ಷೆ ಕತೆಗಳ ಒಳ ಅರ್ಥವೇ ಶೂದ್ರನಾದ ಕನಕದಾಸನಿಗೆ ಸಮಾಜಿಕವಾಗಿ ವೈದಿಕ ಸರಿಸಮಾನ ಸ್ಥಾನಮಾನದ ಸ್ಪಷ್ಟ ನಿರಾಕರಣೆಯಾಗಿದೆ” (ಮರುಚಿಂತನೆ - ೬೨)

ಅವನಿಗೊಂದು ಪುರಾಣದ ಮಹತ್ವಕೊಟ್ಟು ಶೂದ್ರ ಜಾತಿಯ ಸಂಸ್ಕಾರವನ್ನು ತೊಳೆದು ವೈದಿಕ ಮಾರ್ಗದವರು ಮನ್ನಣೆಕೊಡುವುದಕ್ಕಾಗಿಯೇ ಕನಕದಾಸರ ಅವತಾರ ಕಲ್ಪನೆಯ ಕತೆ ಹುಟ್ಟಿರಬಹುದು (ಮರುಚಿಂತನೆ) - ನಿಶ್ಯಬ್ದದ ಜಾಡು - ೧೯-೨೦)

ಶ್ರೀರಾಮನು ನರೆದಲೆಗ-ವ್ರೀಹಿಯರ ಪ್ರಸಂಗವನ್ನು ಗೌತಮ ಮುನಿಗೆ ವಹಿಸಿ, ಅವರಿಗೆ ಆರು ತಿಂಗಳ ಸೆರೆವಾಸವಿಧಿಸಿ, ಅಯೋಧ್ಯೆಗೆ ಬಂದು ಪರಿವಾರದೊಡನೆ ಬೆರೆತು, ಪಟ್ಟಾಭಿಷೇಕ ಮಹೋತ್ಸವದಲ್ಲಿ ಭಾಗಿಯಾಗುತ್ತಾನೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಮುಗಿಯುವ ವೇಳೆಗೆ ಏಳು ತಿಂಗಳಾಗುತ್ತದೆ. ಅಷ್ಟರಲ್ಲಿ ವ್ರೀಹಿ-ನರೆದಲಗರ ಪ್ರಸಂಗ ನೆನಪಾಗಿ ಹನುಮಂತನನ್ನು ಕರೆದು, ಗೌತಮ ಋಷಿಗಳೊಂದಿಗೆ ನರೆದಲೆಗ-ವ್ರೀಹಿಯರನ್ನು ಕರೆದುಕೊಂಡು ಬಾ ಎಂದು ಹೇಳಿ, ಶ್ರೀರಾಮನು ಒಂದು ಬೃಹತ್ ಸಭೆಯನ್ನು ಏರ್ಪಡಿಸಿದನು. ಅವರು ಬಂದ ಮೇಲೆ ಶಿವನನ್ನು ಪ್ರಾರ್ಥಿಸಿದಾಗ ತ್ರೈಭುವನಕರ್ತರು ದೇವಾನುದೇವತೆಗಳು ಸೂರ್ಯ, ಚಂದ್ರ, ಸುರಪ ಮೊದಲಾದವರೆಲ್ಲಾ ಆಗಮಿಸುತ್ತಾರೆ. ಚಾತುರ್‌ವರ್ಣದವರು ನೆರೆಯುತ್ತಾರೆ. ಋಷಿವರೇಣ್ಯರು ಆಗಮಿಸುತ್ತಾರೆ. ಇಂಥ ಸಭೆಗೆ ಮತಿವಂತ ರಾಮ ಸೆರೆಯಲ್ಲಿದ್ದವರನ್ನು ಕರೆಸುತ್ತಾನೆ (ರಾಗಿ-ರಾಮಾಯಣ ೩೮)

"........ ನಿಂತು ಕರಗಳ ಮುಗಿದು ಧರಣೀ
ಕಾಂತ ರಘುವರನೀ ಸುಬುದ್ದಿಯ
ನೆಂತು ನಮಗರುಹುವಿರಿಯದ ಪೇಳೆಂದ ನರೆದಲೆಗ ." (೧೩೧)

ಏಳು ತಿಂಗಳ ನಂತರ ಸಭೆಗೆ ಹಾಜರಾದಾಗ, ಸಭೆಯಲ್ಲಿ ರಾಜರು, ಮುನಿಗಳು, ದೇವಾನುದೇವತೆಗಳೊಂದಿಗೆ ಜನಸಾಮಾನ್ಯರೂ ಕೂಡ ಇರುತ್ತಾರೆ. ಏನು ತಪ್ಪನ್ನೇ ಎಸಗದ ನರೆದಲೆಗನೆ ರಾಮನನ್ನು, ರಾಜಸಭೆಯನ್ನು ಪ್ರಶ್ನಿಸುವಂತದ್ದು ನೋಡಿದರೆ, ಅದು ಅಲ್ಲಿಯವರೆಗೂ ಶಾಂತವಾಗಿದ್ದುದ್ದು ಹೆಚ್ಚಲ್ಲವೆ! ಆದರೂ, ತುಂಬಾ ವಿನಯದಿಂದ ನಮಗೇನು ಸುಬುದ್ಧಿಯನ್ನು ಅರುಹುವಿರಿ ಎಂದು ವಿನಮ್ರವಾಗಿ ಶ್ರೀರಾಮನನ್ನು ಕೇಳುವುದು ಉಚಿತವಾಗಿಯೇ ಇದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಶಾಂತವಾಗಿಯೇ ಪ್ರಶ್ನಿಸುವ ಧೈರ್ಯ ಕನಕದಾಸರದಾಗಿತ್ತು. ಇಂತಹ ಸಮಯದಲ್ಲಿ ಎಂದು ಅವರು ಒರಟಾಗಿ ನಡೆದುಕೊಳ್ಳುವುದು ಅವರ ಇಡೀ ಸಾಹಿತ್ಯ ರಾಶಿಯಲ್ಲಿಯೇ ಕಂಡು ಬರುವುದಿಲ್ಲ. ಎಷ್ಟೇ ನೋವುಂಡುರೂ ಅವರು ಸಮಾಜಕ್ಕೆ ಸಾಹಿತ್ಯದ ಮೂಲಕ ಶಾಂತಿಯ ಸಹಭಾಳ್ವೆಯ ಮಂತ್ರವನ್ನೆ ಉಚ್ಚರಿಸುತ್ತಾ ಶಾಂತ ಸ್ವಭಾವದ ಸಾಕಾರಮೂರ್ತಿಯಾಗಿಯೇ ಕಂಡುಬರುತ್ತಾರೆ.

ನರೆದಲೆಗನ ಮಾತನ್ನು ಕೇಳಿ ಶ್ರೀರಾಮನು ಸಭೆಯನ್ನೊಮ್ಮೆ ನೋಡಿ ಅಲ್ಲಿ ನೆರೆದಿದ್ದ ಘನತಪೋಮಹಿಮರನ್ನು, ದೇವಾನುದೇವತೆಗಳನ್ನು ಕುರಿತು "ಮನವ ವಂಚಿಸಲಾಗದೀ ಧರ್ಮವನು ನೆರೆ ತಿಳಿದು ಅನುನಯದಿ ಪೇಳಿ" ಅಂದರೆ, ಹೇಳುವ ಸತ್ಯಧರ್ಮ ಬೇರೆಯವರಿಗೆ ಕಹಿ ಎನಿಸಿದರೂ ನಯವಾಗಿ ಹೇಳಿ ಎನ್ನುವಲ್ಲಿ ಮೇಲ್ಜಾತಿ ಕೆಳಜಾತಿಯ ಸಾಮರಸ್ಯ ಹದಗೆಡದ ಹಾಗೆ ಹೇಳಿ ಎಂಬ ವಿವೇಕವಿದೆ (ರಾಗಿ - ರಾಮಾಯಣ ೩೯)

"ಆರು ನುಡಿಯಿರೆ ನೀವು ಹಿರಿಯರು
ಮೀರಿಸುವರಾರಿವರೊಳಗೆ ಗುಣ
ಸಾರನಾವನು ಪೇಳೆನಲು ಜಂಬಾರಿ ನಸುನಗುತ
ಸಾರಹೃದಯನು ನರೆದಲಗ ನಿ
ಸ್ಸಾರನೀ ವ್ರೀಹಿಯೆನಲು ಗುಣನಿಧಿ
ಮಾರುತಾತ್ಮಜ ನೋಡಿದನು ಸನ್ನೆಯಲಿ ನಾರದನ" (೧೩೩)

**ನರೆದಲೆಗ -** ಸಭೆಯನ್ನೊಮ್ಮೆ ನೋಡಿ ಕೈಮುಗಿದು "ಭೂಮಿಗೆ ಒಡೆಯನಾದ ಶ್ರೀರಾಮನೆ, ನಮಗೆ ಒಳ್ಳೆಯ ಬುದ್ಧಿಯನ್ನು ದಯಪಾಲಿಸಬೇಕು, ಇದೆನಮ್ಮ ವಿನಂತಿ".

**ಶ್ರೀರಾಮ -** ಸಭೆಯನ್ನೊಮ್ಮೆ ನೋಡಿ, ಪಕ್ಷಪಾತ ಮಾಡಲಾಗದು ಗುಣವನ್ನು ನೋಡಿ, ಶ್ರೇಷ್ಠರಾರು ಎಂಬುದನ್ನು ಹೇಳಿ ಎಂದನು.

**ಪರಶುರಾಮ -** ನೀವು ಹಿರಿಯರು ಯಾರು ಹೇಳುವುದಿಲ್ಲವೆ? ಇವರಲ್ಲಿ ಹೆಚ್ಚಿನ ಶ್ರೇಷ್ಠಗುಣದವರಾರು ಹೇಳಿರಿ ಎಂದನು.

**ಜಂಬಾರಿ -** ಆಗ ನಸುನಗುತ ಇಬ್ಬರನ್ನು ನೋಡಿ, ನರೆದಲೆಗನೇ ಶ್ರೇಷ್ಠ ಸತ್ವಯುತನು,
ಈ ವ್ರೀಹಿ ನಿಸ್ಸಾರನು ಎಂದು ಘೋಷಿಸಿದ.

**ಹನುಮಂತ -** ಪ್ರಶ್ನಾರ್ಥಕವಾಗಿ ನಾರದನ ಮುಖ ನೋಡಲು,

**ನಾರದ -** ನಸುನಗೆಯೊಡನೆ "ಅಹುದು ದೇವೇಂದ್ರ ಹೇಳಿದ ಮಾತು ನಿಶ್ಚಯವಾಗಿಯೂ ಸತ್ಯ."
ನರೆದಲೆಗನೆ ಶ್ರೇಷ್ಠ, ಸಮರ್ಥ, ಸೆರೆಯಲ್ಲಿಡಲು ನರೆದಲೆಗನು ಕಂದಿ - ಕುಂದದೆ ಕಾಂತಿಗೆಡಲಿಲ್ಲ.
ಆದರೆ, ವ್ರೀಹಿ ನಿಸ್ಸಾರನು ಕಾಂತಿಹೀನವಾಯಿತು ಎಂದನು.

**ಕಪಿಲಮುನಿ** - ನವಧಾನ್ಯಗಳಲ್ಲಿ ರಾಗಿಯೇ ಶ್ರೇಷ್ಠ. ಬಡವ ಬಲ್ಲಿದರನ್ನು ಕೂಡಿಯೆ ಸಲಹುತ್ತಾನೆ.
ನೆಲ್ಲು ಕೇವಲ ಶ್ರೀಮಂತರಿಗೆ ಉಪಕರಿಸುವನು. ಅವನಲ್ಲಿ ಸಾರಕಾಣಲು ಆಗುವುದಿಲ್ಲ.

ದೇವತೆಗಳು, ಮುನಿಗಳು ಇದೇ ಮಾತನ್ನು ಬ್ರಾಹ್ಮಣ ಶ್ರೇಷ್ಠರು, ಸಭಿಕರೆಲ್ಲರು ಆನಂದಿತರಾಗಲು ಅರಸನಾದ ಶ್ರೀರಾಮನು -

ಶ್ರೀರಾಮನು - ಮೆಚ್ಚುಗೆ, ಪ್ರೀತಿಯಂದ ನರೆದಲೆಗ ಬಾ ಎಂದು ಕರೆದು, ತನ್ನ ಹೆಸರಾದ ರಾಘವನೆಂಬ ಹೆಸರನ್ನು ನರೆದಲೆಗನಿಗೆ ಕೊಡಲು ರಾಗಿ ಎಂದು ಪ್ರಸಿದ್ಧವಾಗು ಎಂದು ಹಾರೈಸಿದನು.

"ಸಾರವತ್ತಾದ ಗುಣಕ್ಕೆ ಮಾನ್ಯತೆಯೇ ಹೊರತು, ಶ್ರೇಷ್ಠ ಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ನಿಸ್ಸಾರ ಗುಣಕ್ಕೆ ಮಾನ್ಯತೆ ಇಲ್ಲ ಎಂಬ ಧ್ವನಿಯಿದೆ. ಪರಶುರಾಮನ ಪ್ರಶ್ನೆಯಲ್ಲೂ ಅಷ್ಟೇ. ಇಂದ್ರನ ಉತ್ತರದಲ್ಲೂ ಅಷ್ಟೇ (ರಾ.ರಾ.ದ ೩೯) ಮಹತ್ವ ಇದೆ. ಉತ್ತರವು ಅಷ್ಟೇ ಸ್ಪಷ್ಟತೆಯನ್ನು ಒಳಗೊಂಡಿದೆ ಅದನ್ನು ಯಾರು ಬೇಕಾದರೂ ಘೋಷಿಸುವ ಹಾಗಿದೆ".

ಆಗ ಈ ಇಬ್ಬರಲ್ಲಿ ಶ್ರೇಷ್ಠರಾದವರನ್ನು ಜಗತ್ತಿಗೆ ಸಾರಲು ಅಧಿಕಾರ ನೀಡಿದವನು ಶ್ರೀರಾಮ, ಸನ್ನೆ ಮಾಡಿದವನು ಪರಶುರಾಮ, ಸಭೆಯಲ್ಲಿ ನರೆದಲೆಗನೇ ಶ್ರೇಷ್ಠ, ಸಾರವತ್ತದವನು, ಸಮರ್ಥನು, ಆದ್ದರಿಂದ ನರೆದಲೆಗನೇ ಸತ್ವಯುತನು ಎಂದು ಜಂಬಾರಿ ಧ್ವನಿಮಾಡಿದ. ಅಂದರೆ, ಈ ಸಭೆಯಲ್ಲಿ ದೇವ ಮಾನವ ಮುನಿಶ್ರೇಷ್ಠರಿರಲು ಚತುರ್ವರ್ಣ ಸಾಮಾಜಿಕರಿಗೆ ನರೆದಲಗನನ್ನು ಶ್ರೇಷ್ಠನೆಂದು ಸಾರಿದ್ದು ಸುರಪ (ದೇವೇಂದ್ರ).

**ದೀಕ್ಷಾಭೋದೆ**ಯಲ್ಲಿ ಹೀಗೆ ಹೇಳಿದ "ಈಶ ಬ್ರಾಹ್ಮಣ, ವಿಷ್ಣು ಕ್ಷತ್ರಿಯ, ಅಜವೈಶ್ಯ, ಆ ಸುರಪನೊಕ್ಕಲಿಗ ನೆನ್ನಲು ನಿಗಮ ಭಾಷ್ಯ" - (ದೀಕ್ಷಾಭೋದೆ) ಹೀಗಿರುವಾಗ ತೀರ್ಮಾನವನ್ನು ನೀಡುವಲ್ಲಿ ಅಥವಾ ಶ್ರೇಷ್ಠರೆಂದು ಸಾರುವಲ್ಲಿ ರಾಜಸಭೆ ಅವಕಾಶ ನೀಡಿದ್ದು ಯಾರಿಗೆ ಅಂದರೆ, ಚತುರ್ವರ್ಣದಲ್ಲಿನ ಕೊನೆವರ್ಗಕ್ಕೆ ಈ ಅವಕಾಶ, ಅದುವೇ ಕೋನೆಯ ವರ್ಗವೆ ಶ್ರೇಷ್ಠ ಎನ್ನುವ ಅಭಿದಾನ ನೀಡಿದ್ದು, ಅಂದರೆ, ತಮ್ಮವರನ್ನು ತಾವೇ ಶ್ರೇಷ್ಠರೆಂದು ತೀರ್ಮಾನಿಸಲು ದೇವಾನುದೇವತೆಗಳೆದುರಿಗೆ ಸಿಕ್ಕ ಅವಕಾಶ ಅದುವೆ ಶೂದ್ರ ವರ್ಗಕ್ಕೆ ಸಿಕ್ಕ ಮಹಾದಿಗ್ವಿಜಯ ಎಂದು ಕಾಣಬಹುದು.

ಕಪಿಲ ಮುನಿ ಹೇಳುವ "ಇವಗೆ ಸರಿಯುಂಟೆ?" ಎಂಬ ಮಾತು ವ್ಯಾಸರಾಯರು ಕರುಬಿನ ಕರ್ಮಠರ ಕಣ್ಣು ತೆರೆಸಲು ಹೇಳಿದ ನಾಡಾಡಿಯಂತೆಯೆ ಮಾಡಿ ಬಿಟ್ಟರಿ ಇವಗೆ ನಾಡೆಲ್ಲಾ ಹುಡುಕಿದರೂ ಈಡಾರ ಕಾಣೆ (ರಾ.ರಾ.ದ ೪೧) ಇಂತಹ ಮಾತುಗಳು ಕನಕದಾಸರ ಬಗೆಗೆ ಮೆಚ್ಚುಗೆಯಿಂದ ಬಂದ ಮಾತುಗಳು. "ಕನಕನಿಗೆ ಸಂದ ಇಂತಹ ಪ್ರಶಸ್ತಿಯನ್ನು ಸಹಿಸದ ಮಡಿವಂತ ಮತ್ಸರವತಾರಿಯೊಬ್ಬನಿಗೆ ಬುದ್ದಿಗಲಿಸಲು ಮಠದ ಇತರ ಮತಿವಂತರು ಮಾಡಿದ ಪ್ರಯತ್ನವನ್ನು ಕನಕದಾಸರು ಈ ಕೃತಿಯಲ್ಲಿ ಚಿತ್ರಿಸುತ್ತಾರೆ ಎನಿಸುತ್ತದೆ. ಇದಕ್ಕೆ ಜಂಭಾರಿ, ನಾರದ, ಕಪಿಲಮುನಿ ತಮ್ಮ ಅಭಿಪ್ರಾಯಗಳನ್ನು ನಸುನಗುತ ಹೇಳಿದರು ಎಂದು ಅಭಿವ್ಯಕ್ತಿ ಮತಿವಂತನಲ್ಲದ ಮಡಿವಂತ ಮತ್ಸರಾವತಾರಿಗೆ ಬುದ್ದಿಗಲಿಸಲು ಬದ್ಧರಾಗಿ ಪೂರ್ವ ಯೋಜಿತ ರೀತಿಯಲ್ಲಿ ಸನ್ನದ್ಧರಾಗಿ ಬಂದುದನ್ನು ಸೂಚಿಸುತ್ತದೆ; ಹನುಮ ರಾಮ ನಸುನಗುತ ಕೇಳುವುದು ಹೇಳುವುದು ಕೂಡ ಇದೇ ಅಂಶವನ್ನು ಒಳಗೊಂಡಿದೆ ಎನಿಸುತ್ತದೆ." (ರಾ.ರಾ.ದ ೪೧)

ಈ ಬೃಹತ್ ಸಭೆಯಲ್ಲಿ ನರೆದಲೆಗ ಆನಂದ ತುಂಬಿ ಬೀಗುತ್ತಿರುತ್ತಾನೆ. ಅದೇ ಸಮಯದಲ್ಲಿ ಶ್ರೇಷ್ಠನೆಂದು, ಮಾನ್ಯನೆಂದು ಕೂಗಾಡಿದ ವ್ರೀಹಿ ಉಸಿರಿಲ್ಲದೆ ನಿತ್ರಾಣನಾಗಿ ಒಂದು ಮೂಲೆಯಲ್ಲಿ ತಲೆಬಾಗಿ ನಿಂತಿದೆ. ಶ್ರೀರಾಮ ನರೆದಲೆಗನನ್ನು ಕರೆದು ತನ್ನ ಹೆಸರಿನಿಂದ ಭೂಲೋಕದಲ್ಲಿದ್ದ ಪ್ರಸಿದ್ಧನಾಗು ಹೋಗು ಎಂದು ತನ್ನ **ರಾಘವ** ಎಂದು ಹೆಸರಿಸಿ ಅದನ್ನು ಸಂಕ್ಷೇಪಿಸಿ ರಾಗಿಯೆಂದು ಕರೆದು ಹಾರೈಸುತ್ತಾನೆ. ಪೂಜ್ಯ-ಗೌರವದಿಂದ ಶ್ರೀರಾಮನ ಕಾಲಿಗೆರಗಿತು ರಾಗಿ. ಇದನ್ನು ಕಂಡು ದೇವತೆಗಳೆಲ್ಲಾರು ಕೊಂಡಾಡಿದರು. ಮುತ್ತಿನ ಸೇಸೆಯನ್ನು, ಬ್ರಾಹ್ಮಣರು ಹರಿಸಿ, ಮಂತ್ರಾಕ್ಷತೆಗಳನ್ನು ಇತ್ತು ಉಪಚರಿಸಿದರು. ಮುನಿಶ್ರೇಷ್ಠರು ಕೂಡ ರಾಗಿಯನ್ನೇ ಕೊಂಡಾಡಿದರು. ಇಲ್ಲಿ ಮಾನ್ಯತೆಯೇ ಮುಖ್ಯವಾದುದು, ಅದು ಕನಕ ಮಾನಸಿಕ ಧರ್ಮ ಯುದ್ಧಕ್ಕೆ ಜಯವಾಯಿತು. "ತಾವೂ ಅವರಂತೆಯೇ ಶ್ರೇಷ್ಠರಾಗುವ ಹವಣಿಕೆ ಮಾತ್ರ ಇದೆ, ಈ ಬೇಡಿಕೆ ಒಬ್ಬ ಭಕ್ತನ ವಿನಯ ಸಂಪನ್ನನ ಬೇಡಿಕೆಯಾಗಿದೆ. ರಾಗಿ **ರಾಘವ** ನಾಮ ಸಿಕ್ಕಿದ ಮೇಲೆ ಕೂಡ ಅದು ವ್ರೀಹಿಯನ್ನು ಹೀನವಾಗಿ ಕಾಣುವುದಿಲ್ಲ. ಕರೆದು ಮಾತನಾಡಿಸುತ್ತದೆ. ಸಮಾನತೆಯನ್ನು ಹಂಚಿಕೊಳ್ಳುತ್ತದೆ". (ತನ್ನತಾವು ೮೮-೮೯) ಅದಕ್ಕೆ ಸಮಾನಾಗಿ ತಲೆಬಾಗಿ ನಿಂತವನನ್ನು ಸಮಾದಾನಪಡಿಸುತ್ತದೆ. ಅಂದರೆ ಯಾರು ನನ್ನನ್ನು ಅವಮಾನ ಮಾಡುತ್ತಾರೋ ಅಂತವರನ್ನು ಅವರ ಮಟ್ಟದಲ್ಲಿ ನಿಂತು ಅಂತಹವರಿಗೆ ಆತ್ಮಸ್ಥೈರ್ಯವನ್ನು ಹೇಳುವಂತ ಅಂತಃಕರಣ ಕನಕದಾಸರಿಗೆ ಮಾತ್ರ. ನಂತರ ನರೆದಲೆಗನಿಗೆ ದೇವತೆಗಳೆಲ್ಲಾರು ವರಗಳನ್ನು ನೀಡಿ, ಹಾರೈಸಿದರು. "ಬ್ರಹ್ಮ ತನ್ನ ಕರಕಮಂಡಲನ್ನು, ಶಿವ ತ್ರಿಶೂಲವನ್ನು, ಯಮ ದಂಡವನ್ನು ನಾರದ ಚಕ್ರವನ್ನು, ಇಂದ್ರ ಕೂರಿಗೆಯನ್ನು ಆದಿಶೇಷ ನೇಣುಪಾಷಗಳನ್ನು,

ಕುಬೇರ ಯಂತ್ರರಕ್ಷೆ ಗಿಡಮೂಲಿಕೆಯನ್ನು, ಕಾಲಭೈರವನು ವಿಭೂತಿಯನ್ನು, ಸೂರ್ಯನು ಜರಡಿಯನ್ನು, ವರುಣ ಕರಗವನ್ನು" ನೀಡಿ ಆಶೀರ್ವದಿಸಿದರು. ಪಾರ್ವತಿತನ್ನ ಮರುಳ ಬಳಗವನ್ನೆಲ್ಲಾ ಕರೆದು, "ನೀವು ಸ್ತ್ರೀ ರೂಪ ತಳೆದು ಹುರುಳಗೆಡಿಸಿದ ಸರ್ವಭೂತಾತ್ಮರಿಗೆ ಪಕ್ವಾನ್ನವನು ನೀಡಿ" ಎಂದು ಭೀಳ್ಕೊಟ್ಟಳು.

ಈ ರೀತಿಯಾಗಿ ಸರ್ವದೇವಾನುದೇವತೆಗಳಿಂದ ವರಪಡೆದು ಜಗತ್ತಿನಲ್ಲಿ ಪ್ರಖ್ಯಾತನಾದ ನರೆದಲೆಗನನ್ನು ಕುರಿತು ಶಾಂಡಿಲ್ಯಮುನಿ ಧರ್ಮರಾಯನಿಗೆ "ರಾಗಿ ಮರ್ತ್ಯದಲಿ ಎರೆವಾತನಾದನು ನರನಾಥ ಕೇಳೆಂದ" ಈ ಮಾತು ಕನಕದಾಸರು ರಾಮಧಾನ್ಯಚರಿತೆಯಲ್ಲಿ ಕಡೆದು ತೆಗೆದ ನವನೀತ ಎನಿಸದಿರದು! ಏಕೆಂದರೆ ಎರೆವಾತ ಎನ್ನುವುದಕ್ಕೆ ದಾನವನ್ನು ಕೊಡುವಾತ ಎಂಬ ಅರ್ಥವಿರುವಂತೆಯೇ ಅಪ್ಪಣೆಯನ್ನು ಕೊಡುವಾತ ಎಂಬ ಅರ್ಥವೂ ಇದೆ. ಮುಂದೊಂದು ಕಡೆ ಆಜ್ಞೆ ಮಾಡುವ ಅಧಿಕಾರದ ಚುಕ್ಕಾಣಿ ಹಿಡಿದದ್ದನ್ನು ಸೂಚಿಸಿರುವುದರಿಂದ, ಕೆಳವರ್ಗದ ಕೆಳಜಾತಿಯ ಜನ ಒಂದಲ್ಲ ಒಂದು ದಿನ ಆಳುವ ಹಂತಕ್ಕೇರುತ್ತಾರೆ ಎಂಬ ಕಾಲಜ್ಞಾನದ ಕಾಣ್ಕೆಯನ್ನು ತುಂಬ ಸೂಚ್ಯವಾಗಿ ಕಲಾತ್ಮಕವಾಗಿ ಕನಕದಾಸರು ಕಂಡರಿಸಿದ್ದಾರೆ (ರಾ.ರಾ.ದ. ೪೨)

ತಲೆ ಬಾಗಿದ ವ್ರೀಹಿಯನ್ನು, ಬಾಡಿದ ಮುಖವನ್ನು, ನೀರು ತುಂಬಿದ ಕಣ್ಣನ್ನು ಕಂಡು ರಾಮ ನೆಲ್ಲಿನ ನೋವನ್ನು ಶಮನಗೊಳಿಸಲು ಪ್ರಯತ್ನಿಸುತ್ತಾನೆ.

ಮರುಳೆ ಬಾರೈ ವ್ರೀಹಿಯೆ ಮನದಲಿ
ಕೊರಗಿ ಚಿಂತಿಸಬೇಕೆ.....
.....ಲೋಕವ ಹೊರೆವಿನದು ಕಾರಣವೆ ಪತಿಕರಿಸಿದೆವು ಕೇಳೆಂದ. (೧೪೭)

ಮರುಳೆ ಎನ್ನುವುದಕ್ಕೆ ಮತಿಹೀನ ಎಂದು ನಿಂದಿಸಿದ್ದನ್ನು ವ್ರೀಹಿಗೇ ತಿರುಗುಬಾಣವನ್ನಾಗಿ ಮಾಡಿರುವುದನ್ನು ಗಮನಿಸಬಹುದು. ಅಷ್ಟೇ ಅಲ್ಲ, ಬರಗಾಲದಲ್ಲಿ ಲೋಕವನ್ನು ಸಾಕುವ ಸಮೂಹ ಹಿತದ ಕಾಳಜಿ ನರೆದಲೆಗನಿಗಿದ್ದರಿಂದಲೇ ನಾವು ಅವನನ್ನು ಸತ್ಕರಿಸಿದ್ದು ಎಂದು ಹೇಳುವ ಮೂಲಕ ವ್ರೀಹಿಗೆ ಸಮೂಹ ಹಿತಕ್ಕೆ ಬದಲಾಗಿ ಸ್ವಾರ್ಥ ಮಾತ್ರ ಇದೆ ಎಂಬುದನ್ನು ಅನುಕ್ತವಾಗಿ ಸೂಚಿಸಲಾಗಿದೆ. ಹೀಗೆ ಸಾಂತ್ವನ ಮಾಡುವ ನೆಪದಲ್ಲಿಯೇ ಸ್ವಭಾವಗುಣವನ್ನು ಪರೋಕ್ಷವಾಗಿ ಧ್ವನಿಸುವ ಇದು ಅಭಿವ್ಯಕ್ತಿಯ ಪ್ರಬುದ್ಧತೆಗೆ ಸಾಕ್ಷಿಯಾಗಿದೆ. ಮುಂದೆ ನಿಷ್ಠಾದೇವಿಯನ್ನು ಕರೆದು ನೆಲ್ಲು-ರಾಗಿಗಳನ್ನು ಅವಳಿಗೆ ಕೊಡುತ್ತಾನೆ. ಇದುವರೆಗೂ ಶ್ರೇಷ್ಠಕುಲ ಸಂಜಾತನೆಂದೂ, ಮಡಿವಂತನೆಂದೂ ಬೀಗುತ್ತಿದ್ದ ನೆಲ್ಲು, ಕನಿಷ್ಠ ಕುಲ ಸಂಜಾತನಾದರೂ ಮತಿವಂತನಾದ ರಾಗಿ ಜೊತೆಯಲ್ಲಿ ಮೈಗೆ ಮೈ

ತಾಕುವಂತೆ ನಿಷ್ಠಾದೇವಿಯ ಸೆರಗಿಗೆ ಸೇರಿದ್ದು ತುಂಬ ಧ್ವನಿಪೂರ್ಣವಾಗಿದೆ ; ಸದ್ದಿಲ್ಲದೆ ತಾರತಮ್ಯ ರಹಿತ ಸಮಾನತೆಯನ್ನು ತಂದಿರುವ ರೀತಿ ಸೊಗಸಾಗಿದೆ.

—

ಅಧ್ಯಾಯ - ಐದು

# ಕನಕದಾಸರ ರಾಮಧಾನ್ಯ ಚರಿತ್ರೆಯಲ್ಲಿ ಕಾಣುವ ಮಾನವೀಯತೆಯ ಸ್ವರೂಪ

## ಪುರಾಣ ಮತ್ತು ವರ್ತಮಾನವನ್ನು ಭಿನ್ನವಾಗಿ ಕಟ್ಟಿಕೊಡುವ ರೀತಿ

ಕನಕದಾಸರ ರಾಮಧಾನ್ಯಚರಿತೆ ಒಂದು ವಿಶಿಷ್ಟವಾದಕೃತಿ. ಸಾಹಿತ್ಯ ಜಗತ್ತಿನಲ್ಲಿ ಯಾರೂ ಬಳಸದ, ಪಾತ್ರಗಳ ಸ್ಥಾನದಲ್ಲಿ ಆಹಾರ ಧಾನ್ಯಗಳಾದ ರಾಗಿ-ಭತ್ತಗಳು ಇರುವುದ. ಇಡೀ ರಾಮಾಯಣ ಕೃತಿಗಳಲ್ಲಿ ಎಲ್ಲಿಯೂ ಪ್ರಸ್ತಾಪವಾಗದ ಪ್ರಸಂಗವಾಗಿದೆ. ರಾಮ ಚರಿತ್ರೆಯ ಮೂಲಕ ರಾಮಧಾನ್ಯದ ಚರಿತೆ ಹೇಳುವುದು ಕನಕದಾಸರ ಮೂಲ ಉದ್ದೇಶ. ಜೊತೆಗೆ ರಾಮಾಯಣ ಎಂಬ ಪುರಾಣ ಸಂಸ್ಕೃತಿಯೊಳಗೆ, ರಾಮಧಾನ್ಯ (ರಾಗಿ)ದ ಪರಿಚಯದೊಂದಿಗೆ, ಸಮಾಜ ಸಂಸ್ಕೃತಿಯನ್ನು ಮಾನವೀಯತೆಯ ಪರಿಧಿಯೊಳಗೆ ತರುವುದು ಕನಕದಾಸರ ಮುಖ್ಯ ಉದ್ದೇಶ. ಕನಕದಾಸರು ಬದುಕಿದ ಕಾಲದಲ್ಲಿನ ಸಮಾಜದ ಎಲ್ಲಾ ಹಂತಗಳಲ್ಲಿಯೂ ಕೂಡ ಅಸಮಾನತೆಯ ಭಾವನೆ ತಾಂಡವವಾಡುತ್ತಿತ್ತು. ಜೊತೆಗೆ ಸಮಾಜದ ಮೇಲುಸ್ಥರದಲ್ಲಿದ್ದ ಪುರೋಹಿತ ಸಮಾಜವು ಪುರೋಹಿತೇತರರಾದ ಸಾಮಾನ್ಯರ ಸಮಾಜವನ್ನು ತುಂಬಾ ತುಚ್ಛವಾಗಿ ಕಾಣುತ್ತಿತ್ತು. ಜೊತೆಗೆ ಅಪಮಾನ, ಅವಹೇಳನ ನಿಂದನೆ ಮಾಡಿ, ಅವರಲ್ಲಿ ಚೇತನವಿಲ್ಲದಂತೆ, ಜಡರನ್ನಾಗಿ ಮಾಡುವಲ್ಲಿ ಯಶಸ್ಸನ್ನು ಪಡೆದಿತ್ತು. ಅಂತಹ ವರ್ಗದ ವಿರುದ್ಧ ಧ್ವನಿಯೆತ್ತಿದವರು ಕನಕದಾಸರೊಬ್ಬರೆ. 'ಇಂತಹ ಅಸಮಾನತೆಗಳ ವಿರುದ್ದ ಸಿಡಿದೆದ್ದವರು ಅದನ್ನು ಸಮೂಹದಲ್ಲಿ ಸಾಮೂಹಿಕವಾಗಿ ಅನುಸರಿಸಿದ್ದು, ಶರಣರು ಮಾತ್ರ ಶರಣರ ನಂತರದ ಕಾಲಮಾನದಲ್ಲಿ ಇಂತಹ ಸಾಂಪ್ರದಾಯದ ವಿರುದ್ಧ ಪುರೋಹಿತಶಾಹಿಯ ವಿರುದ್ಧ ಬಂಡಾಯ ರೀತಿಯಲ್ಲಿ ಕನಕದಾಸರು ಮತ್ತು ಅವರ ಸಾಹಿತ್ಯ ನಿಲ್ಲುತ್ತದೆ'. ಅವರು ನಾಯಕ ಪದವಿ ಬಿಟ್ಟನಂತರ, ಆಧ್ಯಾತ್ಮಿಕತೆಯ ಮೂಲಕ ಸಮಾಜಕ್ಕೆ ತನ್ನ ಸಂದೇಶವನ್ನು ಮುಟ್ಟಿಸಲು ಅವರು ಸಾಹಿತ್ಯಕ್ಷೇತ್ರಕ್ಕೆ ಬಂದರು. ಅದು ಉಚ್ಛ - ನೀಚವರ್ಗವೆನ್ನದೆ, ಎಲ್ಲರಿಗೂ ತಲುಪಲು ಸಾಧ್ಯವಾಗುವುದು ಪುರಾಣಗಳಿಂದ ಮಾತ್ರ ಎಂದು ಮನಗಂಡ ದಾಸರು, ತಮ್ಮ ಸಾಹಿತ್ಯಕ್ಕೆಲ್ಲ ಪುರಾಣತನವನ್ನು ತುಂಬಿದರು. ಈ ಪುರಾಣಾಗಮನದಿಂದ ಮಾತ್ರ ಎಲ್ಲ ಜನಸಮಾನ್ಯರನ್ನು ತಲುಪುವುದು ಸಾಧ್ಯವೆಂದು ಮನಗಂಡ ಕನಕದಾಸರು ಇತರ ಎಲ್ಲ ಹರಿದಾಸರಿಗಿಂತ ಒಂದು ಪಾಲು ಮಿಗಿಲಾಗಿ ಕಾಣುತ್ತಾರೆ. ಏಕೆಂದರೆ, ಅವರು

ಉಳಿದವರಂತೆ ಭಕ್ತಿಗೆ ಸೀಮಿತವಾಗದೆ, ಸಮಾಜದಲ್ಲಿನ ಸಾಮಾಜಿಕ ಜೀವನವನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಸೆರೆ ಹಿಡಿದರು. ಸಮಾಜದ ತಾರತಮ್ಯದ ಧೋರಣೆಯನ್ನು ವಿರೋಧಿಸುವುದರ ಮೂಲಕ ಶೋಷಿತರ ಪರವಾದ ಧ್ವನಿಯನ್ನು ಮೊಳಗಿಸಿದ್ದಾರೆ. ದಾಸರು ತಮ್ಮ ಕೃತಿಗಳಲ್ಲಿ ಅಂದಿನ ಜನಜೀವನವನ್ನು ಸಾಂಸ್ಕೃತಿಕ ಬದುಕುನ್ನು ಸಮಾಜವಿರೋಧಿ ನೀತಿಗಳನ್ನು ಅವರು ಸೆರೆಹಿಡಿದಿದ್ದಾರೆ.

ಕನಕದಾಸರು ಪುರಾಣವನ್ನು ಅರಗಿಸಿಕೊಂಡಿದ್ದರು. ಆದ್ದರಿಂದ ಅವರು ಆ ಪುರಾಣವನ್ನು ತನ್ನೆಲ್ಲಾ ಸಾಹಿತ್ಯದಲ್ಲಿ ಹಚ್ಚಹಸುರಾಗಿಸಿದ್ದಾರೆ. ಕನಕದಾಸರು ಇತರೆಲ್ಲಾ ಕೀರ್ತನಕಾರರಂತಲ್ಲ. ಅವರು ಹರಿದಾಸರ ಪರಂಪರೆಯಲ್ಲಿಯೇ ಒಂದು ಅಪರೂಪದ ವ್ಯಕ್ತಿ. ಯಾವ ದಾಸರೂ ಮಾಡದ ಸಾಧನೆ ಇವರದ್ದು. ಹರಿದಾಸರೆಲ್ಲಾ ಪುರಾಣಭಕ್ತಿಗಷ್ಟೇ ಸೀಮಿತವಾದರೆ, ಕನಕದಾಸರು ಪುರಾಣವನ್ನು ಅರಗಿಸಿಕೊಂಡು ಅನನ್ಯ ಭಕ್ತಿಯ ಮೂಲಕ ಸಮಾಜವನ್ನು ಪುರಾಣದೊಳಗೆ ಸಮೀಕರಿಸಿ, ಕೃತಿಗಳನ್ನು ರಚಿಸಿ, ಹರಿದಾಸ ಪರಂಪರೆಯಲ್ಲಿ ಇತರೆಲ್ಲಾ ದಾಸರಿಗಿಂತ ವಿಶಿಷ್ಟ ಸ್ಥಾನ ಪಡೆದಿದ್ದಾರೆ. ಅವರು ಭಗವಂತನನ್ನೇ ಮಾತನಾಡಿಸಬಲ್ಲವರಾಗಿದ್ದರು. ಆ ಭಗವಂತನಾದರೂ ಈ ದಾಸರ ಮಾತನ್ನು ಕೇಳುತ್ತಿದ್ದನೆಂದೇ ಕಾಣುತ್ತದೆ. ಆದ್ದರಿಂದಲೇ ಉಡುಪಿಯ ಶ್ರೀಕೃಷ್ಣಮಂದಿರದ ಶ್ರೀಕೃಷ್ಣ ಇವರಿಗೆ ದರ್ಶನ ನೀಡಿದ. ಇದೊಂದು ಐತಿಹಾಸಿಕ ದಾಖಲೆಯಾಗಿಯೇ ಇಂದಿಗೂ ಇತಿಹಾಸ ಪ್ರಸಿದ್ಧವಾದ **ಕನಕನ ಕಿಂಡಿ** ಎಂದು ಹೆಸರುವಾಸಿಯಾಗಿದೆ. ಆದರೆ, ಇಂತಹ ಐತಿಹಾಸಿಕತೆಯನ್ನು ಪಡೆದಿರುವ ಸ್ಥಳವನ್ನು ದೇವಾಲಯಗಳ ಯಜಮಾನಿಕೆಯನ್ನು ಬಯಸುವ ಜನಾಂಗವೊಂದು ಆ ಸ್ಥಳವನ್ನು ನವಗ್ರಹ ಕಿಡಿಯೆಂದು ಕರೆಯುವ ವಾಡಿಕೆಯಿದೆ. ಅಂದರೆ ಯಜಮಾನ್ಯ ಸಂಸ್ಕೃತಿಯು ನಮ್ಮ ಜನಪದ ಸಂಸ್ಕೃತಿಯ ಬದುಕನ್ನು, ಅದರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಳ್ಳುದು, ಇದು ಇಂದಿಗೂ ಕೂಡ ಕಂಡುಬರುವುದನ್ನು ಮನಗಾಣಬಹುದು.

ಕನಕದಾಸರ ಭಕ್ತಿಯನ್ನು ಹರಿದಾಸ ಪರಂಪರೆಯಲ್ಲಿ ಬರುವ ಇತರ ಕೀರ್ತನಕಾರರ ಭಕ್ತಿಯಂತೆ ಕಾಣಲಾಗದು. ಅವರು ಭಗವಂತನನ್ನೇ ತರಾಟೆಗೆ ತೆಗೆದುಕೊಳ್ಳುವಷ್ಟರ ಮಟ್ಟಿಗೆ ಕೇಶವದಾಸರೊಳಗೆ ಸೇರಿಕೊಂಡಿರುತ್ತಾನೆ. ಆತನೆ ಕನಕದಾಸರಾಗಿ ನುಡಿಸುತ್ತಾನೆ. ಹಾಗಾಗಿ ಕನಕರು ಅವನನ್ನು ಎಷ್ಟು ಸಾಮಿಪ್ಯದಿಂದ ಗೌರವಾದರದಿಂದ ಕಾಣುತ್ತಾರೆಂದರೆ, ಆತ್ಮೀಯ ಸ್ನೇಹದ ಸಂಬಂಧವಾಗಿ ಭಗವಂತನನ್ನು ತನ್ನಲ್ಲಿ ಹುದುಗಿಸಿಕೊಂಡ ಕನಕದಾಸರು ಆತನೊಡನೆ ಕಳೆಯುವ ಆತನ ಧ್ಯಾನದಲ್ಲಿ ಮುಳುಗುವ ರಸನಿಮಿಷಗಳನ್ನು ಕೂಡ ಮನಗಾಣಬಹುದು. ಅಂತಹ ಒಂದು ಸನ್ನಿವೇಶವನ್ನು "ಪ್ರೊ। ಕಿ.ರಂ.ನಾಗರಾಜ್ ಅವರ **ಕಾಲಜ್ಞಾನಿ ಕನಕ** ಎಂಬ ನಾಟಕದಲ್ಲಿ ಬರುವ ಒಂದು ಸನ್ನಿವೇಶ. ಅಲ್ಲಿ ಯಜಮಾನ ಸಂಸ್ಕೃತಿಯಲ್ಲಿ

ದೇವಾಲಯಗಳನ್ನು ತಮ್ಮ ಹಿಡಿತಲ್ಲಿಟ್ಟುಕೊಂಡಿರುವ ಪುರೋಹಿತಶಾಹಿ ವರ್ಗದ ನಡುವೆ ಮತ್ತು ಕನಕದಾಸ ಮತ್ತು ಅವರ ಅನುಯಾಯಿಗಳ ನಡುವೆ ದೇವಾಲಯ ಪ್ರವೇಶದ ಬಗ್ಗೆ ವಾಗ್ವಾದ ನಡೆಯುತ್ತದೆ. ಆ ಸಮಯದಲ್ಲಿ ಗುಡಿಯೊಳಗೆ ಕನಕದಾಸರ ಗುರುಗಳಾದ ವ್ಯಾಸರಾಯರು, ಕನಕರ ಸಮಕಾಲೀನರಾದ ಪುರಂದರರು ಮತ್ತು ವ್ಯಾಸರಾಯರ ಶಿಷ್ಯರೂ ಗುಡಿಯಲ್ಲಿರುತ್ತಾರೆ. ಗುಡಿಯೊಳಗೆ ಬ್ರಾಹ್ಮಣೇತರರಿಗೆ ಪ್ರವೇಶವನ್ನು ನಿರಾಕರಿಸುವ ಬ್ರಾಹ್ಮಣ ವರ್ಗ ಒಂದೆಡೆಯಾದರೆ, ದೇವಾಲಯದ ಒಳ ಹೋಗಲು ಪ್ರಯತ್ನಿಸುವ ಕನಕ ಮತ್ತು ಆತನ ಅನುಯಾಯಿಗಳು ಮತ್ತೊಂದೆಡೆ - ಹೀಗಾಗಿ ಅಲ್ಲಿ ಗಲಾಟೆ ಪ್ರಾರಂಭವಾಗುತ್ತದೆ. ಕನಕನ ಭಕ್ತಿ ಎಷ್ಟಿತ್ತೆಂದರೆ, ದೇವಾಲಯದೊಳಗಿನ ಕೇಶವನನ್ನು ಪುರೋಹಿತಶಾಹಿಯ ಹಿಡಿತದಿಂದ ಬಿಡಿಸಿ,ಬಯಲು ಮಾಡುವುದೇ ಆಗಿತ್ತು. ಬಾಗಿಲಿನಲ್ಲಿ ಅಡ್ಡ ಇದ್ದವರನ್ನು "......ಅಡ್ಡಿಯಾದವರನ್ನು ಬೇಧಿಸಿಕೊಂಡು ಗರ್ಭಗುಡಿಯಿಂದ ಕೇಶವ ಕೊಳಲನ್ನೂದುತ್ತಾ, ಹೊರಬರುತ್ತಾನೆ. ಮಠದ ವ್ಯಕ್ತಿಗಳು ವ್ಯಾಸರಾಯರು ದಿಗ್ಭ್ರಮೆಗೊಳ್ಳುತ್ತಾರೆ.

**ಕನಕ** : ಕೇಶವ ......ಬಂದೆಯಾ? ಹೋಗೋಣ ಬಾ,

ಕೇಶವ ಪ್ರೀತಿಯಿಂದ ಕನಕ - ಪುರಂದರರ ಹೆಗಲಿನ ಮೇಲೆ ಕೈ ಇಡುತ್ತಾನೆ

**ಕನಕ** : ಮುಟ್ಟದಿರು......ನನ್ನನ್ನು ಮುಟ್ಟದಿರು.

**ಪುರಂದರ** : ನೀನ್ಯಾಕೋ ನಿನ್ನ ಹಂಗ್ಯಾಕೋ ......

**ಕನಕ** : ನಾನು ಆಲಯದ ಕೇಶವನನ್ನು ನೋಡೋಕೆ ಬಂದಿಲ್ಲ. ಅವನನ್ನು ಬಯಲಿನಲ್ಲಿ ಬಯಲು ಮಾಡಲು ಬಂದಿದ್ದೇನೆ. ಆಲಯದ ಕಗ್ಗತ್ತಲಿನಲ್ಲಿ ಸೊರಗುವ ಕೇಶವನೂ ಬೇಡ ; ಕೃಷ್ಣನೂ ಬೇಡ, ಬೆಳಕಿನ ಕಡೆಗೆ ಹೋಗುವಂತವರು ನಾವು ಇಚ್ಛೆ ಇದ್ದರೆ, ನೀನೂ ಬಾ.

**ಕೇಶವ:** ನಾನು ಎಂದಿನಿಂದಲೂ ಅಲೆಮಾರಿ

**ಕನಕ** : ನಾನು ನಿನ್ನೊಳಗೂ ಇಲ್ಲ, ನೀನು ನನ್ನೊಳಗೂ ಇಲ್ಲ ......

ಪುರಂದರ ಕೇಶವನ ಕೈಗೆ ತಾಳವನ್ನು ಕೊಡುತ್ತಾನೆ. ಕನಕ ತನ್ನ ಬುವನಾಸಿಯನ್ನು ತೂಗು ಹಾಕುತ್ತಾನೆ. ಕೇಶವ, ಕನಕ-ಪುರಂದರರ ಜೊತೆ ಜನ ಸಮೂಹದಲ್ಲಿ ಸೇರುತ್ತಾನೆ". (ಸಾಹಿತ್ಯ ನಂದನದಲ್ಲಿ ಕಾಲಜ್ಞಾನಿ ಕನಕ೧೬೩ ಪುಟ)

ಇಲ್ಲಿ ಭಕ್ತ-ಭಗವಂತರ ನಡುವೆ ನಡೆಯುವ ಮೌಖಿಕ ಕ್ರಿಯೆ ರೋಮಾಂಚನಕಾರಿಯಾದುದು. ಭಕ್ತನಾದ ಕನಕನು ಭಗವಂತನೊಡನೆ ಮಾತಾಡುವುದು ಮತ್ತು ಭಗವಂತ ಭಕ್ತನ ಅಣತಿಯಂತೆ ಅವನೊಡನೆ ಜಡಕತ್ತಲಿನಿಂದ ಪುರೋಹಿತಶಾಹಿಯ ಕಪಿಮುಷ್ಟಿಯಿಂದ ಬಿಡಿಸಿಕೊಂಡು ಪ್ರಖರ ಬೆಳಕಿನೆಡೆಗೆ ನಡೆದು ಬೆಳಕಾಗುವುದು. ಭಕ್ತನ ಜೊತೆ ಸ್ನೇಹಿತನಂತೆ ಜೊತೆಯಾಗಿ ದೇವಾಲಯದ ಹೊರಭಾಗದ ಬಯಲಿನಲ್ಲಿ ಜನ ಸಮೂಹವಿರುವೆಡೆಗೆ ಚಲಿಸುವುದು, ಇದು ನಿಜಕ್ಕೂ ಕನಕನ ಪ್ರಾಮಾಣಿಕ ಭಕ್ತಿಯ ಫಲ.

ಭಗವಂತನಿಗಾಗಿ ವ್ರತಾಚರಣೆ, ಹೋಮ-ಯಾಗ, ಯಜ್ಞಾದಿ ಪೂಜೆಗಳೊಂದಿಗೆ ಭಗವಂತನಿಗಾಗಿ ಹಾತೊರೆಯುವ ಮನಸ್ಸುಗಳು ಒಂದೆಡೆ ಅವರಿಗೆ ಭಗವಂತನ ಕೃಪೆಯಾಗದೆ, ಆಕೃಪೆ ಕನಕದಾಸನಂತಹ ಭಕ್ತನಿಗಾಗುವುದು ಕಂಡುಬರುತ್ತದೆ. ಅಂದರೆ, ಪ್ರಕೃತಿಯಲ್ಲಿ ಕತ್ತಲಲ್ಲಿದ್ದು, ಬೆಳಕಿಗಾಗಿ ಪಾಡು ಪಡುವವರು ಒಂದು ವರ್ಗ ಅದು ಪುರೋಹಿತಶಾಹಿ ಅಥವಾ ಯಾಜಮಾನ್ಯ ಸಂಸ್ಕೃತಿಯ ಬ್ರಾಹ್ಮಣರ ಅಹಂಕಾರದಲ್ಲಿರುವವರು. ಆದರೆ, ಯಾವಾಗಲೂ ಭಗವಂತನ ಭಕ್ತಿಯ ಬೆಳಕಿನಲ್ಲಿ ಸದಾ ಬೆಳಗುವವರು ಒಂದು ವರ್ಗ. ಅಂತಹ ವರ್ಗವೊಂದರ ನೇತಾರ ಕನಕದಾಸರು ಮಾತ್ರ.

ಸಾಮಾನ್ಯ ಭಕ್ತನೊಬ್ಬನ ಭಕ್ತಿಯ ಆರ್ತನಾದವನ್ನು ಕೇಳಿ ತಾನು ಕತ್ತಲಲ್ಲಿ ಜಡನಾಗಿಲ; ಬೆಳಕಿನಲ್ಲಿ ಬಯಲಾಗುತ್ತಿದ್ದೇನೆ ಎಂಬುದನ್ನು ಸಾಭೀತುಪಡಿಸುವ ಭಗವಂತನನ್ನು ಕಂಡಾಗ ಕನಕದಾಸರ ಶ್ರೇಷ್ಠ ಭಕ್ತಿಯನ್ನು ಮನಗಾಣಬಹುದು. ಸಾಮಾನ್ಯ ಮಾನವನೊಡನೆ ಭಗವಂತ ಜೊತೆಯಾಗುವುದು ವಿಶೇಷ ; ಅದಕ್ಕೆ ಪ್ರಾಮಾಣಿಕತನದ ತುಂಬು ಭಕ್ತಿ ಬೇಕು. ಅದು ಕನಕನಲ್ಲಿತ್ತು. ದೇವ-ಮಾನವರ ಸಂಬಂಧ ಒಂದು ರೀತಿಯಲ್ಲಿ ಇಲ್ಲಿ ಪುರಾಣ-ಸಮಾಜದ ಮಿಲನದಂತಿದೆ. ಇಲ್ಲಿಯೇ ಹರಿದಾಸ ಪರಂಪರೆಯಲ್ಲಿಯೇ ಕನಕರು ಬೇರೆಯಾಗುತ್ತಾರೆ.

ಕನಕದಾಸರು ಬದುಕಿ ಬಾಳಿದ ಅಂದಿನ ದಿನಗಳಲ್ಲಿ ಅವರು ರಚಿಸಿದ ಸಾಹಿತ್ಯವು ಅವರ ಕಾಲಧರ್ಮ, ರಾಜಧರ್ಮ, ಸಮಾಜಧರ್ಮ ಮತ್ತು ತಮ್ಮ ಮನೋಧರ್ಮಕ್ಕೆ ನ್ಯಾಯ ಸಿಗುವಂತೆ ಸಾಹಿತ್ಯ ರಚಿಸಿದ್ದಾರೆ. ಸಾಮಾನ್ಯರ ಬದುಕನ್ನು ಹಸನುಗೊಳಿಸುವತ್ತಾ ನೀತಿಯಂತಿರುವ ಅವರ ಸಾಹಿತ್ಯ, ಡಾಂಭಿಕಜನರನ್ನು ಕುರಿತು ಟೀಕಿಸುವಂತಹದ್ದು ಕೂಡ ಸೇರಿಕೊಂಡಿದೆ. ಮೇಲಾಗಿ ಅವರು ಮಹಾಭಕ್ತರು, ಭಗವಂತನನ್ನು ಸ್ತುತಿಸುವುದು ಅವರ ಸಾಹಿತ್ಯದಲ್ಲಿ ತುಂಬಿಕೊಂಡಿದೆ. ತಮ್ಮ ಬದುಕಿನುದ್ದಕ್ಕೂ ಕಂಡು - ಉಂಡು ಅನುಭವಿಸಿದ ಎಲ್ಲಾ ಅನುಭವಗಳನ್ನು ಕೂಡ ತಮ್ಮ ಸಾಹಿತ್ಯದಲ್ಲಿ ಹುದುಗಿಸಿದ್ದಾರೆ. ಅವರ ಅನುಭವವೇ ತೀರ ಹತ್ತಿರವಿರುವ ಕೃತಿಗಳಲ್ಲಿ ರಾಮಧಾನ್ಯ ಚರಿತೆ ಮುಖ್ಯವಾದದ್ದು. ಈ ಕೃತಿಯಲ್ಲಿ

ಅವರು ರಾಗಿಯ ಮಹತ್ವವನ್ನು ಹೇಳುವುದು ಮುಖ್ಯವಲ್ಲ, ಜೊತೆಗೆ ರಾಮಾಯಣವನ್ನು ತಿಳಿಯ ಹೇಳುವುದು ಅವರ ಜಾಯಮಾನವಲ್ಲ, ಅವರ ದೃಷ್ಟಿಯೇ ಬೇರೆಯಾಗಿದೆ. ಪುರಾಣ ವಸ್ತುವಿನೊಳಗೆ ಸಮಾಜಿಕ ವಿಷಯವನ್ನು ರಾಗಿಯ ಪ್ರತಿನಿಧಿಕರಣದ ಮೂಲಕ ಜಗತ್ತಿಗೆ ಸಾರುವುದು ಮುಖ್ಯವಾಗಿತ್ತು. ಆದ್ದರಿಂದ ಅವರು ರಾಮಧಾನ್ಯ ಚರಿತ್ರೆಯಲ್ಲಿ ರಾಮಾಯಣ ಕಥೆಯೊಳಗೆ ರಾಗಿ-ಭತ್ತದ ಪ್ರಸಂಗ ತಂದು; ಆ ಎರಡು ಧಾನ್ಯಗಳನ್ನು ಸಮಾಜದ ಎರಡು ಸ್ಥರಗಳ ಪ್ರತಿನಿಧಿ ಮಾಡಿ, ಪುರಾಣ ಕಥೆಯ ಮೂಲಕ ಸಮಾಜಿಕ ಸಮಸ್ಯೆಯೊಂದನ್ನು ಜಗತ್ತಿಗೆ ತಿಳಿಯಪಡಿಸುತ್ತಾರೆ. ಅಷ್ಟೇಯಲ್ಲ, ಸಮಾಜಲ್ಲಿ ನೊಂದವರಿಗೆ, ಶೋಷಿತರಿಗೆ ನ್ಯಾಯ ಒದಗಿಸಿಕೊಡುವಲ್ಲಿ ಈ ಕೃತಿಯು ಬಹುಮುಖ್ಯವಾಗಿದೆ. ರಾಗಿ ಅಂದಿನ ಜನಪದರ ಮುಖ್ಯ ಧಾನ್ಯವಾಗಿರಲಿಕ್ಕೂ ಸಾಕು. ಅದು ಅವರೆ ಹೇಳುವಂತೆ ಬಡವ - ಬಲ್ಲಿದರೆನ್ನದೆ, ಎಲ್ಲರನ್ನೂ ಸಮಾಧಾನ ಚಿತ್ತದಿಂದ ಸೇವಿಸುತ್ತಿತ್ತು. ಇಂದಿಗೂ ಕೂಡ ರಾಗಿ ತನ್ನ ಮನೋಧರ್ಮವನ್ನು ಹಾಗೆಯೇ ಉಳಿಸಿಕೊಂಡು ಬೆಳೆದು ಬಂದಿದೆ.

ಹರಿದಾಸ ಪರಂಪರೆಯ ಅಭ್ಯುದಯ ಕಾಲದಲ್ಲಿ ಕನಕದಾಸರು ಬದುಕಿದ್ದರು. ಪುರಾಣದೊಳಗೆ ಸಮಾಜವನ್ನು ತಂದು ಕಾವ್ಯ ರಚಿಸಿದ ಮಹಾಕವಿವರ್ಯರು. ಪುರಾಣವನ್ನು ಮಾನವೀಯ ನೆಲೆಯೊಳಗೆ ಸಾಮಾಜಿಕಗೊಳಿಸುವ ದಾರ್ಶನಿಕರು ಮತ್ತು ಮಹಾ ಭಕ್ತರು ಕೂಡ. ಅವರು ಸಾಮಾನ್ಯ ಭಕ್ತರಾಗದೆ, ಭಕ್ತಿಯ ರೂಪವಾದರು. ಭಕ್ತಿಪಂಥಕ್ಕೆ ಮತ್ತೊಂದು ಅರ್ಥ ಹುಡುಕುವುದಕ್ಕಿನ ಕನಕದಾಸರೆ ಸೂಕ್ತವಾದ ಅರ್ಥ ಎನ್ನಬಹುದು. ಅವರು ಸಮಾಜದಲ್ಲಿನ ಜನ ಸಾಮಾನ್ಯರ ಬದುಕನ್ನು ಉದ್ಧಾರ ಮಾಡುವುದರತ್ತಾ ತಮ್ಮನ್ನು ತೊಡಗಿಸಿಕೊಂಡವರು. ತೊಡಗಿಸಿಕೊಂಡು, ಅವರ ಜೀವಿತಾವಧಿಯ ಕೊನೆಯ ವರೆಗೂ ಹಾಗೆಯೇ ಬದುಕಿದ ಮಹಾತ್ಮರು.

ಕನಕದಾಸರು ಪ್ರಭುತ್ವ ಸಂಸ್ಕೃತಿಯನ್ನು ತ್ಯಜಿಸಿ, ಭಕ್ತಿ ಮತ್ತು ದಾಸ ಸಂಸ್ಕೃತಿಯತ್ತ ಮುಖ ಮಾಡಿ ಹೊರಟದ್ದು, ನಿಜವಾಗಿ ಅದೊಂದು ಅಮೃತಘಳಿಗೆ ಎಂದೇ ಹೇಳಬಹುದು. ಕನಕರು ನಾಯಕ ಪದವಿಯನ್ನು ಬಿಟ್ಟು ದಾಸದೀಕ್ಷೆಯನ್ನು ಪಡೆದ ಮೇಲೆ ಅವರು ಸಮಾಜೋದ್ಧಾರವನ್ನು ಮತ್ತು ಸಮಾಜದಲ್ಲಿನ ಓರೆ ಕೋರೆಗಳನ್ನು ಬಯಲು ಮಾಡುತ್ತಾ, ಅಧ್ಯಾತ್ಮ ಜೀವನದಿಂದ ಮಾತ್ರ ಮುಕ್ತಿ ಸಾಧ್ಯ ಎಂಬುದನ್ನು ಮನಗಂಡು ಅಧ್ಯಾತ್ಮಿಕದ ಜೊತೆಗೆ ಕಾವ್ಯಕೃಷಿಯನ್ನು ಮಾಡಿದರು. ದಾಸ ಜೀವನ ಕೈಗೊಂಡ ಮೇಲೆ ಸಮಾಜವನ್ನು ತುಂಬಾ ಹತ್ತಿರದಿಂದ ಕಂಡರು. ಮತ್ತು ಸಮಾಜದಲ್ಲಿ ನಡೆಯುವ ಎಲ್ಲಾ ರೀತಿಯ ಅವಮಾನ, ಶೋಷಣೆ, ದೌರ್ಜನ್ಯ ಇತ್ಯಾದಿಗಳನ್ನು ಕಂಡವರಾದ ದಾಸರು ಅಂದಿನ ಜನಜೀವನ, ಸಾಂಸ್ಕೃತಿಕ ಬದುಕನ್ನು ತಮ್ಮ ಬರಹದಲ್ಲಿ ದಾಖಲಿಸಲು ಮರೆಯಲಿಲ್ಲ.

ಕನಕದಾಸರ ಸಂದರ್ಭದಲ್ಲಿ ಇದ್ದ ಬದುಕುವ ಮಾದರಿಗಳೆಂದರೆ, ಎರಡು. ಒಂದು ಶ್ರೇಷ್ಠವೆಂಬ ಬ್ರಾಹ್ಮಣ್ಯಕಡೆಗೆ ಹೋಗುವುದು. ಎರಡು ಸ್ಥಳ ಬಿಡದಿರುವುದು. ಪ್ರತಿ ಸ್ಥಳ ಪಲ್ಲಟದಲ್ಲಿ ರಾಜ, ಮಂತ್ರಿ, ಡಣಾಯಕ ಆಗುವುದೆಂದಾಗ ಕೂಡ ಬ್ರಾಹ್ಮಣ್ಯವನ್ನು ಅನುಸರಿಸುವುದು ಅನಿವಾರ್ಯವಾಗಿತ್ತು. ತಿಮ್ಮಪ್ಪನಾಯಕ ಹಿಂದೆ ಹೋಗುವುದಿಲ್ಲವೆಂದಾದರೆ, ತಿಮ್ಮಪ್ಪ- ಕನಕ ; ಕನಕ - ಕನಕನಾಯಕ ; ಕನಕದಾಸ ಆಗುವುದೇ ಅಂದಿನ ಅನಿವಾರ್ಯ ಕ್ರಿಯೆಯಾಗಿತ್ತು. ಮೂಲವನ್ನು ತೊರೆದು ಬಿಡುವ ಮತ್ತು ಅದೇ ಸಂದರ್ಭದಲ್ಲಿ ಮಹಿಮಾನ್ವಿತನಾಗುವ ನಿಯಮಮಾತ್ರವೇ ಪ್ರಗತಿ, ಬಂಡಾಯ ಅಥವಾ ಅಭಿವೃದ್ಧಿ ಆಗಿರುತ್ತಿತ್ತು. (ತನ್ನ ತಾವು ೭೭)

ತಿಮ್ಮಪ್ಪನಾಗಿದ್ದಾಗ ಸಂಬಂಧಗಳು ಮತ್ತು ಅಧಿಕಾರ ಸಂಬಂಧಗಳನ್ನು ಕಳೆದುಕೊಂಡು ಸಮಾಜದಲ್ಲಿ ಅನಾದಾರಣೆಗೆ ಗುರಿಯಾದ ಈ ತಿಮ್ಮಪ್ಪನಿಗೆ ದೊರೆತ ಅಪಾರ ದ್ರವ್ಯದಿಂದ ಆತ ಮತ್ತೆ ಸಾಮಾಜಿಕ ಸಂಬಂಧಗಳನ್ನು ಗಟ್ಟಿಗೊಳಿಸಿಕೊಂಡ ನಂತರ ತಿಮ್ಮಪ್ಪನು - ಕನಕನಾದ ಸಾಮಾನ್ಯ ಜನ ಜೀವನದಲ್ಲಿದ್ದ ಈತ ಎಲ್ಲರ ಆಕರ್ಷಣೆಗೂ ಪಾತ್ರನಾದ ಮತ್ತೆ ವಿಶೇಷ ವ್ಯಕ್ತಿತ್ವವನ್ನು ಗಳಿಸಿಕೊಳ್ಳುತ್ತಲೇ ಕನಕ ಕನಕನಾಯಕನಾದ. ಸಮಾಜದಲ್ಲಿ ನೈತಿಕ ಮತ್ತು ಭೌತಿಕವಾಗಿ ಪ್ರವರ್ಧಮಾನಕ್ಕೆ ಬಂದ ಕನಕನಾಯಕ ಜನಮನ್ನಣೆಯಿಂದ ಪಣಾಯಕ ಪದವಿಯನ್ನು ಮತ್ತೆ ಪಡೆದ. ಈ ಪದವಿ ಆತನನ್ನು ತುಂಬು ದಿನ ಆಳ್ವಿಕೆ ಮಾಡಗೊಡಲಿಲ್ಲ. ಯುದ್ಧದಲ್ಲಿ ಸೋತು, ಭೋಗ ಸಂಸ್ಕೃತಿಗೆ ಬೆನ್ನು ಮಾಡಿದರು. ಮುಂದೆ ಮೋಕ್ಷ-ಆಧ್ಯಾತ್ಮ ಸಂಸ್ಕೃತಿಯತ್ತ ಮುಖ ಮಾಡಿದರು. ಅಲ್ಲಿನ ಯುದ್ಧ ಭೂಮಿಯಿಂದಲೇ ಅವರು ಯಾವ ಗುರುಗಳು ನೀಡದ ದೀಕ್ಷೆ ಪಡೆದರು. ಮನುಷ್ಯ ಬದುಕಲು ಯುದ್ಧ ಬೇಕಿಲ್ಲ ಎನ್ನುವ ಜ್ಞಾನೋದಯವಾದನಂತರ ಅವರು ಅವರ ಅನುಯಾಯಿಗಳಿಗೆ ಹೀಗೆ ಹೇಳಿದರು.

“ಕನಕ - ನಿಮಗೆ ದಾರಿ ತೋರಿಸುವ ಶಕ್ತಿ ಈಗ ನನ್ನಲ್ಲಿಲ್ಲ. ನೀವೆಲ್ಲ ನನ್ನನ್ನು ನಾಯಕ ಅಂತ ಪ್ರಭು ಅಂತ ತಳಿದಿದ್ದೀರಿ. ಆದರೆ, ನಾನು ನನ್ನ ಹುಡುಕಾಟದಲ್ಲಿ ತೊಡಗಿದ್ದೇನೆ. ನಾನು ಶಾಸ್ತ್ರ ಓದಿದೆ, ಕಾವ್ಯಗಳನ್ನು ಓದಿದೆ, ಬರೆದೆ, ಆದರೆ ನನ್ನ ಮನಸ್ಸಿಗೆ ಹತ್ತಿದ ಸಂಶಯ ಮಾತ್ರ ಕಳೆಯಲಿಲ್ಲ. ನನಗೆ ಉಪದೇಶ ಕೊಡಲು ಶಕ್ತಿಯೂ ಇಲ್ಲ; ಇಚ್ಛೆಯೂ ಇಲ್ಲ. ಅಂಥವರು ಅನೇಕರು ಸಿಕ್ಕಿಯಾರು, ಆದರೆ ಯಾರು ಆ ಕಾರ್ಯವನ್ನು ತೋರಿಸಲಿಲ್ಲ. ಆದ್ದರಿಂದ ನನಗೆ ನಾನೇ ಆಗಿ ಹೊರಟಿದ್ದೇನೆ ”. (ಸಾಹಿತ್ಯ ನಂತನದಲ್ಲಿ ಕಾಲಜ್ಞಾನಿ ಕನಕ ೧೩೬-೧೩೭) ಈ ಹಂತದಲ್ಲಿ ಕನಕದಾಸರು ಯಾರಿಗೂ ಯಾವುದೇ ರೀತಿಯ ಸಮರ್ಥನೆ ನೀಡದೆ, ತನ್ನದೆಯಾದ ತನ್ನ ಹುಡುಕಾಟಕ್ಕೆ ಅಣಿಯಾಗುತ್ತಿದ್ದಾರೆ.

ಆದ್ದರಿಂದ ಅವರು ಯಾರಿಗೂ ಏನನ್ನೂ ಹೇಳಬಯಸುವುದಿಲ್ಲ. ಏಕೆಂದರೆ ಅವರಿಗೆ ಈಗಷ್ಟೇ ಆಧ್ಯಾತ್ಮಿಕ ಸೂರ್ಯ ಅವರ ಪಾಲಿಗೆ ಮುಂಜಾನೆಯಂತೆ ಸೂರ್ಯೋದಯ ಪೂರ್ವಕಾಲದ ಸ್ಥಿತಿಯಾಗಿರುವ ದಾಸರು ಮೌನಮುಖವಾಗುತ್ತಾರೆ. ಮುಂದೆ ಉದಯಿಸುವ ಸೂರ್ಯ ರಶ್ಮಿಯಿಂದ ಮೊದಲಿಗೆ ಆ ಬೆಳಗಿನಲ್ಲಿ ಅವರು ಏನು ನುಡಿಯುತ್ತಾರೆ ಎನ್ನುವುದು.

"ಕನಕ - ಮನುಷ್ಯ ಬದುಕಿಗೆ ಪರಾಕ್ರಮದಿಂದ ಆಗಬೇಕಾದ್ದು ಏನೂ ಇಲ್ಲ. ಯುದ್ಧ ಹಿಂಸೆಗಳಿಲ್ಲದೆ, ಆಯುಧಗಳ ಅಹಂಕಾರವಿಲ್ಲದೆ, ಮನುಷ್ಯ ಬದುಕಬಹುದು (ಸಾಹಿತ್ಯ ನಂದನದಲ್ಲಿ ಕಾಲಜ್ಞಾನಿ ಕನಕ ೧೩೭) ಮಾನವನ ಶಾಂತಿಯುತ ಜೀವನಕ್ಕೆ ಪರಾಕ್ರಮ, ಯುದ್ಧ ಅನಾವಶ್ಯಕ. ಅವುಗಳಿಂದ ಯಾವುದೇ ರೀತಿಯಲ್ಲಿಯೂ ಉಪಯೋಗವಿಲ್ಲ ಎಂಬುದನ್ನು ದಾಸರು ಮನಗಂಡರು. ಅವರು ಯುದ್ಧ ವಿಮುಖರಾದ ನಂತರ ನಾಯಕತನವನ್ನು ಬಿಟ್ಟು ದಾಸತನಕ್ಕೆ ಬಂದುದು ಒಂದು ದೀಕ್ಷೆಯಾಯಿತು. ಅವರಿಗೆ ಅವರ ತಿಳಿವೆ ಗುರುವಾಗಿತ್ತು ; ಆದ್ದರಿಂದಲೆ ಕನಕನಾಯಕ - ಕನಕದಾಸರಾಗಿ ಬದಲಾದರು. ಕನಕನ ಹಿರಿಮೆ ಗರಿಮೆಗಳು ವ್ಯಾಸರಾಯರ ಮಠದವರೆಗೂ ಹರಿಯಿತು. ಕನಕನ ವ್ಯಕ್ತಿತ್ವವನ್ನು ತಿಳಿದೆ ವ್ಯಾಸರಾಯರು ಶಿಷ್ಯತನ ನೀಡಿದ್ದು ಎಂಬುದನ್ನು ನಾವು ಮನಗಾಣಬೇಕು. ಇಲ್ಲಿ ಮನಗಾಣಬೇಕಾದ ವಿಷಯಗಳು ಎರಡು. ಒಂದು, ಕನಕದಾಸನಿಗಾದ ಜ್ಞಾನೋದಯ ಇಂದು ಆಧುನಿಕ ಯುಗದಲ್ಲಿ ಯಾರಿಗೂ ಆಗಲೊಲ್ಲದು!! ಏಕೆಂದರೆ ಇಂದು ಮನದೊಳಗೆ ಪ್ರತಿಕ್ಷಣ ಯುದ್ಧಗಳು ನಡೆಯುತ್ತಿವೆ, ಆದರೂ ಯಾರೂ ಯುದ್ಧ ಬೇಕಿಲ್ಲ ಎನ್ನುವವರಲ್ಲ, ಯುದ್ಧದ ನೆರಳಿನಲ್ಲಿಯೇ ಬದುಕಬಯಸುವ ನಾಗರೀಕ ಜನಾಂಗದಲ್ಲಿ ಶಾಂತಿಯ, ಸಹಕಾರದ ಸಹಬಾಳ್ವೆಯ ಜೀವನ ಯಾರಿಗೂ ಕೂಡ ಬೇಕಾಗಿಲ್ಲ. "ಇಂದಿನ ತಾಂತ್ರಿಕ - ಯಾಂತ್ರಿಕ ನಾಗರಿಕತೆಯಲ್ಲಿ ಏಕತೆಯ ಸಂಸ್ಕೃತಿ ಜೀವನಕ್ಕಿಂತ, ವಿಘಟಿತ ಸಂಸ್ಕೃತಿ ತನ್ನ ಶಕ್ತಿಯನ್ನೆಲ್ಲಾ ಬಳಸಿ ಮಾನವ ಜನಾಂಗವನ್ನು ಅಪ್ಪಿಕೊಳ್ಳುವುದರತ್ತ ಮುನ್ನುಗ್ಗುತ್ತಿದೆ. ಮಾನವ ಜನಾಂಗವಾದರೊ ಅದರ ಮೋಹಕ್ಕೆ ಒಳಗಾಗಿ ವಿಘಟ್ಟಿನ ಸಂಸ್ಕೃತಿಯನ್ನೆ ಅಪ್ಪಿಕೊಳ್ಳುವುದರತ್ತ ಬದುಕುತ್ತಿದ್ದಾರೆ". ಎರಡನೆಯದಾಗಿ ಕನಕದಾಸರಿಗೆ ಅರಿವಿಲ್ಲದೆ, ಜ್ಞಾನವಿಲ್ಲದ ಸಾಮಾನ್ಯ ಮನುಷ್ಯನಾಗಿದ್ದರೆ, ವ್ಯಾಸರಾಯರು ಕೂಡ ಹತ್ತಿರ ಸೇರಿಸುತ್ತಿರಲಿಲ್ಲ ಎಂಬುದನ್ನು ನಾವು ತಿಳಿಯಬೇಕಾಗಿದೆ. ಕನಕ ತಿಳಿದವನಾಗಿ, ಜ್ಞಾನಿಯಾಗಿ ನಂತರವೇ ಈ ಬ್ರಾಹ್ಮಣ್ಯದ ಮಟ್ಟಕ್ಕೇರಲು ಪ್ರಯತ್ನಿಸಿದ ಆತನ ಜ್ಞಾನದ ಆಳವನ್ನು ತಿಳಿದ ವ್ಯಾಸರಾಯರು ಇವರತ್ತ ಆಕರ್ಷಿತರಾಗಿ, ಬ್ರಾಹ್ಮಣನಲ್ಲದವನೊಬ್ಬನಿಗೆ ಶಿಷ್ಯತನ ನೀಡಿದರೂ, ಅಲ್ಲಿನ ಕಿರುಕುಳಗಳು, ಅಪಮಾನ, ನಿಂದನೆಗಳು ಕೊನೆಯಾಗದ್ದು ಮಾತ್ರ ಸೋಜಿಗವೆನಿಸುತ್ತದೆ. ಕನಕದಾಸನನ್ನು ವ್ಯಾಸರಾಯರು ತನ್ನ ಶಿಷ್ಯರೊಂದಿಗೆ ಪರೀಕ್ಷೆಗೆ ಒಡ್ಡಿದಾಗಲೂ ಕನಕದಾಸನು ತನ್ನ ಪಕ್ವತೆಯನ್ನು ತೋರ್ಪಡಿಸಿದರು ಕೂಡ ಆತ

ಬ್ರಾಹ್ಮಣರೊಳಗೆ ಸೇರಲಾಗಲಿಲ್ಲ, ಆಗಲೇ ಆತ ಕೇಶವನ ಅನನ್ಯಭಕ್ತನಾದ, ಭಗವಂತ ತನ್ನ ಪ್ರೀತಿಗೆ ಪಾತ್ರನಾದ ಭಕ್ತನನ್ನು ಉದ್ಧಾರ ಮಾಡಿದ. ಅಂದರೆ, ಕನಕದಾಸನಿಗಿಲ್ಲದ ದರ್ಶನ ಇನ್ನಾರಿಗೆ ಬೇಕು? ಎನ್ನುವ ಭಗವಂತನ ಪ್ರಶ್ನೆಗೆ ಉತ್ತರ ದೊರೆಯಲಾರದು. ಆದ್ದರಿಂದ ಇಂದಿಗೂ ಕೂಡ ಭಕ್ತನ ದರ್ಶನದ ಸ್ಥಳವೇ ಸರ್ವರ ದರ್ಶನ ಭಾಗ್ಯವಾಗಿದೆ. ಅದಕ್ಕೇ **ಕನಕನ ಕಿಂಡಿ** ಎಂಬ ಹೆಸರಿನಿಂದ ಇತಿಹಾಸ ಪ್ರಸಿದ್ಧವಾಗಿದೆ. ಇದು ಇತಿಹಾಸದ ವಿಷಯಕ್ಕಿಂತ, ಅದು ಭಕ್ತ-ಭಗವಂತನ ಸಮಾಕರ್ಷಿತ ಭಾವನೆಯ ಸ್ಥಳವಾಗಿದೆ. ಅದು ಭಕ್ತ-ಭಗವಂತರಿಗೆ ಗೌರವಾರ್ಹವಾದ ಪೂಜ್ಯನೀಯ ಪವಿತ್ರ ಸ್ಥಳ. ಈ ಸ್ಥಳವನ್ನು ಕನಕನ ಕಿಂಡಿ ಎಂದು ಇತಿಹಾಸಕ್ಕೇ ಸೇರಿಸಿದರೂ, ಭಕ್ತ-ಭಗವಂತರ ಸಮಾನ ಸಮಾಗಮದ ಸಮನಪ್ರತಿಪತ್ತಿಯ ಸ್ಥಳವಾಗಿದೆ. ಸಾಮಾನ್ಯವಾಗಿ ಈಗ ಇರುವ ಕನಕನ ಕಿಂಡಿ ಎನ್ನುವುದಕ್ಕಿಂತ ಮೇಲಿನ ಅಭಿಪ್ರಾಯವೆ ಶ್ರೇಷ್ಠ. ಏಕೆಂದರೆ, ಬರಿ ಕನಕದಾಸನಾಗದೆ, ಅಲ್ಲಿ ಅನನ್ಯ ಭಕ್ತನಾಗಿದ್ದ, ಆತ ಭಗವಂತನನ್ನು ದರ್ಶನಾಕಾಂಕ್ಷಿಯಾಗಿದ್ದ ಅದು ಮುಖ್ಯ. ಅಂದರೆ ನೋಡುವುದು ಎಂದು ಅರ್ಥವಲ್ಲ. ಅದು ದೇವ-ಮಾನವರ ಮನಮಿಲನವಾಗುವುದು ಎಂದು ಅರ್ಥ. ಹಾಗಾಗದೆ ಹೋಗಿದ್ದರೆ, ಭಗವಂತ-ಭಕ್ತನೆಡೆಗೆ ಬರುತ್ತಿರಲಿಲ್ಲ ಎನ್ನುವುದನ್ನು ನಾವು ಮನಗಾಣಬೇಕು. ಈ ಹಂತದ ಶ್ರೇಷ್ಠತೆಯನ್ನು ಸಾಧಿಸಿದ ದಾಸರಿಗೆ ಅಪಮಾನ, ಅವಹೇಳನಗಳು ಕಡಿಮೆಯಾಗಲಿಲ್ಲ. ಅಂದರೆ, ಅಂದಿನ ಜಡ್ಡುಗಟ್ಟಿದ ಸಂಪ್ರದಾಯ ಮತ್ತು ಪಟ್ಟಭದ್ರ ಹಿತಾಸಕ್ತಿಯ ಕೇಂದ್ರವಾಗಿದ್ದ ಪುರೋಹಿತಶಾಹಿ ಕನಕದಾಸನೆದುರಲ್ಲಿ ಸೋಲನ್ನೊಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅಂದರೆ, **'ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ'** ಎನ್ನುವ ಗಾದೆಯನ್ನು ನೆನಪಿಗೆ ತರುತ್ತದೆ. ಇಂದಿಗೂ ಕೂಡ ಕನಕನ ಕಿಂಡಿಯ ಮೂಲಕವೇ ಸಮಸ್ತರೂ ಭಗವಂತದರ್ಶನ ಪಡೆಯಬೇಕಾದರೆ, ಕನಕರ ಮಹತ್ವ ಏನು ಎನ್ನುವುದನ್ನು ನಾವು ಅರ್ಥೈಸಬೇಕಾಗುತ್ತದೆ.

ಕನಕದಾಸರು ಒಬ್ಬರಾಗಿರಲಿಲ್ಲ, ಅವರು ಒಂದು ವರ್ಗದ ಅಥವಾ ಒಂದು ಸಮೂಹದ, ಒಂದು ಸಮಾಜದ ಧ್ವನಿಯಾಗಿದ್ದರು. ಆ ಸಮೂಹವನ್ನು, ಆ ವರ್ಗವನ್ನು, ಸಮಾಜವನ್ನು ಇನ್ನೊಂದರತ್ತ ತರಲು ಶ್ರಮಿಸಿದರು. ಅವರು ಎಂದೂ, ಎಲ್ಲಿಯೂ ಬ್ರಾಹ್ಮಣರನ್ನು ನಿಂದಿಸುವುದಾಗಲಿ, ಅವಮಾನಕರವಾಗುವಂತೆ ನಡೆಯುವುದಾಗಲಿ, ಅವರು ಎಂದೂ ಒಂದು ಮಾತನ್ನು ಆಡುವುದಿಲ್ಲ. ಅವರ ಇಡೀ ಕಾವ್ಯ ಮತ್ತು ಕೀರ್ತನಾ ಸಾಹಿತ್ಯವು ಅಂತಹ ಒಂದೇ ಒಂದು ಸುಳಿವನ್ನು ನೀಡುವುದಿಲ್ಲ. ಕನಕದಾಸರು ಮೇಲ್ವರ್ಗವನ್ನು ಕಂಡು ದ್ವೇಷ ಅಸೂಯೆ ಭಾವನೆಗಳನ್ನು ಎಂದೂ ಮನದಲ್ಲಿ ತಂದುಕೊಂಡವರಲ್ಲ, ನಿರ್ಮಲ ಮನದಿಂದ, ಅನನ್ಯಭಕ್ತಿಯಿಂದ ಅವರ ಮನಸ್ಸು ತುಡಿಯುತ್ತಿತ್ತು. ಅಂದರೆ ತನ್ನ ವರ್ಗ, ಸಮೂಹ, ಸಮಾಜವನ್ನು ಮೇಲುಸ್ಥರಕ್ಕೆ ಕೊಂಡೊಯ್ಯುವುದೆ ಆಗಿತ್ತು. 'ತನಗಾದ ಎಲ್ಲ ಅವಮಾನಗಳು, ನಿಂದನೆಗಳನ್ನು ಮನವೆಂಬ

ಮಡಿಕೆಯಲ್ಲಿ ಈ ಎಲ್ಲಾ ವಿಷಯಗಳನ್ನು ಸುರಿದು, ಬುದ್ಧಿ ಎಂಬ ಕಡೆಗೋಲಿನಿಂದ ಕಡೆದು, ತೆಗೆದ ನವನೀತವೇ ಅವರ ಸಾಮಾಜಿಕ, ಬಂಡಾಯದ ಧ್ವನಿಯಾಗಿ, ಆತ್ಮಚರಿತ್ರೆಯಾಗಿ ಕಾಣಿಸುವ ಈ 'ರಾಮಧಾನ್ಯಚರಿತೆ'ಯನ್ನು ಸಾಹಿತ್ಯ ಜಗತ್ತಿಗೆ ನೀಡಿದ್ದಾರೆ.'

ಇಂತಹ ಸಾಮಾಜಿಕ ಅಸಮತೋಲನವನ್ನು ಸಮಾಜಕ್ಕೆ ನೀಡಿದರೆ, ಅದು ಯಾರ ಗಮನಕ್ಕೂ ಬರುವುದಿಲ್ಲ ಎಂಬುದನ್ನು ಮನಗಂಡು ದಾಸರು ಅದಕ್ಕೆ ಪುರಾಣಚೌಕಟ್ಟಾಕಿ, ಧಾನ್ಯಗಳನ್ನು ಸಮಾಜದ ಪ್ರತಿನಿಧಿ ಮಾಡಿ, ಕಾವ್ಯ ಸೃಷ್ಟಿಸಿದರು. ಕನಕದಾಸರಿಗೆ ಪುರಾಣದ ಬಗೆಗೆ ಅಪಾರ ತಿಳಿವಿತ್ತು, ಅದನ್ನು ತನ್ನ ಕಾವ್ಯಗಳಲ್ಲೆಲ್ಲಾ ಬಳಸಿಕೊಂಡಿದ್ದಾರೆ. ಪುರಾಣದ ಜೊತೆಗೆ ಸಮಾಜಿಕ ವಿಷಯವನ್ನು ಸಮೀಕರಿಸಿದ ರೀತಿಯಂತು ಔಚಿತ್ಯಪೂರ್ಣವಾಗಿದೆ. ಅಷ್ಟೆಯಲ್ಲ, ಅವರು ಈ ಕಾವ್ಯವನ್ನು ಸಮಾಜವನ್ನೇ ಪುರಾಣೀಕರಣ ಮಾಡುತ್ತಾರೆ. ಹಾಗೆಯೇ ಪುರಾಣವನ್ನು ಸಾಮಾಜಿಕರಣಗೊಳಿಸುತ್ತಾರೆ. ಅಂತಹ ವಿದ್ವತ್ ಪಾಂಡಿತ್ಯವುಳ್ಳ ದಾಸರು ರಾಮನ ಕಥೆಯನ್ನು ನೆಪಮಾತ್ರದಲ್ಲಿ ಹೇಳುತ್ತಾ ಅಲ್ಲಿ ಯಾವ ಗೊಂದಲವಾಗದಂತೆ ಸರಳ ಮಾತುಗಳಲ್ಲಿ ಸಾರಾಂಶ ರೂಪದಲ್ಲಿ ಹೇಳಹೊರಟು ಸಾಮಾಜಿಕ ವಿಷಯ ಬೀಜವನ್ನು ಬಿತ್ತುತ್ತಾರೆ. ಆ ಸಮಾಜಿಕ ಬೀಜ ಮತ್ತೆ ಫಲ ಬರಲು ಸುಮಾರು ಏಳು ತಿಂಗಳು ಬೇಕಾಗುತ್ತದೆ. ಏಳು ತಿಂಗಳುಗಳನ್ನು ದಾಸರು ಏಕೆ ಬಳಸಿಕೊಂಡರು ಎಂದರೆ, ಅದಕ್ಕೆ ಕಾವ್ಯದಲ್ಲಿಯೇ ಉತ್ತರ ಸಿಗುತ್ತದೆ. ಸಾಮಾಜಿಕ ತಾರತಮ್ಯವನ್ನು ಕೇವಲ ರಾಮನೊಬ್ಬನ ಗಮನಕ್ಕೆ ತರುವುದು ಮುಖ್ಯವಾಗಿರುತ್ತದೆ. ಈ ರೀತಿ ಮಾಡಿದರೆ, ಸಮಾಜಕ್ಕೆ ಸಾಮಾಜಿಕ ನ್ಯಾಯವನ್ನು ತಂದುಕೊಡುವಲ್ಲಿ ಯಶಸ್ಸು ಸಿಗುವುದಿಲ್ಲ ಎಂದು ಭಾವಿಸಿದ ದಾಸರು, ಅದನ್ನು ದೇವಾನುದೇವತೆಗಳ ಬಳಿಗೆ ಒಯ್ದರೆ ಸರಿಯೆಂದೇ ಭಾವಿಸಿ, ಕಥೆಯುಆಶ್ರಮದಲ್ಲಿಯೇ ರಾಮ-ಋಷಿ, ಮುನಿಗಳ ಎದುರಿನಲ್ಲಿ ಮುಗಿಯದ ಹಾಗೇ ನಡೆಸಿಕೊಂಡು ಅದಕ್ಕೆ ಸ್ವಲ್ಪ ಕಾಲಾವಕಾಶವನ್ನು ಪಡೆದು, ಸರ್ವ ದೇವಾನು ದೇವತೆಗಳ ಸಭೆಯಲ್ಲಿ ಸಮಾಜವನ್ನು ತರುವುದು ಕೂಡ ಅವರ ಚತುರತೆಗೆ ಸಾಕ್ಷಿ. 'ಇಲ್ಲಿ ದಾಸರು ಸಮಾಜವನ್ನು ದೈವತ್ವಕ್ಕೆ ತರುವುದು, ದೈವತ್ವವನ್ನು ಸಮಾಜದೊಳಗೆ ತರುವುದು ಕನಕದಾಸರ ಕಾವ್ಯತಂತ್ರವನ್ನು ಕಂಡು ಬೆರಗಾಗದವರಾರು' ಕೇವಲ ಕಾಡಿನಲ್ಲಿಯೇ ತಿರ್ಮಾನವಾಗಿದ್ದರೆ, ಸಮಾಜ ಕಾಡುಪಾಲಾಗುತ್ತಿತ್ತು. ಅದನ್ನು ದೈವತ್ವದ ಸ್ಥಾನಕ್ಕೆ ತರುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ತೀರ್ಪು ನೀಡಲು ಏಳು ತಿಂಗಳ ಅವಕಾಶ ಮತ್ತು ಇದನ್ನು ಜಗತ್ತಿಗೆ ಜಾಹೀರುಗೊಳಿಸಲು ಕೈಗೊಂಡ ಕ್ರಮ ಔಚಿತ್ಯಪೂರ್ಣವಾಗಿದೆ.

ವಿಷಯ ಸಾಮಾಜಿಕದ್ದಾದರೂ ಅದು ದೈವತ್ವದ ಜೊತೆಗೆ ಸಾಮಾಜಿಕರು ಸೇರಿದ ಸಭೆ ಅಂದರೆ, 'ದೈವೋಸಮಾಜ'ದಲ್ಲಿ ಸಾಮಾಜಿಕ ಚರ್ಚೆ, ಜೊತೆಗೆ ಒಂದು ಸ್ತರದ ಸಮಾಜವನ್ನು ಮತ್ತೊಂದು ಅಥವಾ ಮೇಲುಸ್ಥರದ ಸಮಾಜವನ್ನು ಸಮೀಕರಿಸುವ

ತೀರ್ಮಾನ ಬಹುಮುಖ್ಯವಾದದು. ಈ ಸಭೆಯಲ್ಲಿ ರಾಮ-ರಾಮನ ಪರಿವಾರ, ದೇವಾದಿ ದೇವತೆಗಳ ಪರಿವಾರ, ಸಮಾಜದಲ್ಲಿರುವ ಚತುರ್ವರ್ಣರು, ಋಷಿಮುನಿಗಳು, ವಾನರ ಪರಿವಾರ - ಇಷ್ಟೆಲ್ಲಾ ಸೇರಿದ ಒಂದು ಸಭೆಯನ್ನು ಊಹಿಸುವುದು ಕಷ್ಟದ ಕೆಲಸ. ಆದರೆ, ಅದನ್ನು ಕಾವ್ಯದಲ್ಲಿ ತಂದುದನ್ನು ಗಮನಿಸಿದರೆ, ಕನಕದಾಸರು ಎಂತಹ ಪ್ರತಿಭಾಸಂಪನ್ನರೆಂಬುದನ್ನು ಕಾಣಬಹುದು. ಸಮಾಜದ ಒಂದು ವರ್ಗವನ್ನು ಮತ್ತೊಂದು ವರ್ಗದ ನಡುವಿನ ಅಸಮಾನತೆಯ ವಿಷಯವನ್ನು ; ಸಾಮಾಜಿಕರ ದಿನನಿತ್ಯದ ಬಳಕೆಯ ಧಾನ್ಯಗಳಾದ 'ರಾಗಿ-ಭತ್ತ'ಗಳನ್ನು ಪಾತ್ರೀಕರಿಸಿದ್ದು, ಮೇಲ್ವರ್ಗದ ಸಮಾಜದ ಪ್ರತಿನಿಧಿಯಾಗಿ ಭತ್ತವನ್ನು, ಕೆಳವರ್ಗದ ಸಮಾಜದ ಪ್ರತಿನಿಧಿಯಾಗಿ ರಾಗಿಯನ್ನು ಕಾವ್ಯದಲ್ಲಿ ತರುತ್ತಾರೆ. ಆ ಪಾತ್ರಗಳು ಸಮಾಜದ ಎರಡು ವರ್ಗವನ್ನು ಪ್ರತಿನಿಧಿಸುವಂತೆ ಮಾಡಿ, ಸಭೆಯ ತೀರ್ಮಾನದಲ್ಲಿ ಸಮಾಜದಲ್ಲಿದ್ದ ತಾರತಮ್ಯಭಾವನೆಯನ್ನು ಹೋಗಲಾಡಿಸಿ, ಸಾಮಾಜಿಕರೆಲ್ಲಾರು ಒಂದೇ ಎನ್ನುವುದು, ಸಭೆಯ ಒಟ್ಟಾರೆ ತೀರ್ಮಾನವಾದಂತಾಯಿತು. ಅಲ್ಲಿ, ಸಭೆಯಲ್ಲಿ ನಿಸ್ಸಾರನೆಂದು, ಬಲಹೀನನೆಂದು ಕಂಡುಬಂದ ಭತ್ತವನ್ನು ತುಚ್ಛೀಕರಿಸುವುದಿಲ್ಲ, ಬದಲಾಗಿ ಕೆಳಸ್ಥರದ ಸಮಾಜಿಕರು ಕೂಡ ಇತರರಂತೆ ಮನುಷ್ಯರು ಎನ್ನುವುದನ್ನು ಶೂದ್ರ ಸ್ಥಾನದಲ್ಲಿದ್ದ ರಾಗಿಯನ್ನು - ಭತ್ತದೊಡನೆ ಜೊತೆ ಮಾಡುವುದು. ಇಲ್ಲಿ ಯಾರೂ ಕೀಳು, ಯಾರೂ ಮೇಲು ಎನ್ನುವ ಭಾವನೆ ಸಲ್ಲದು, ಸಮಾಜಿಕರೆಲ್ಲಾ ಒಂದೇ ಎನ್ನುವಂತೆ ತೀರ್ಪನ್ನು ನೀಡುವುದು. ನಂತರ ನಿಷ್ಪಾದೇವಿಯ ಮಡಿಲಿಗೆ ರಾಗಿ-ಭತ್ತಗಳನ್ನು ಒಟ್ಟಾಗಿಸುವುದು ಐಕ್ಯತೆಯ ಭಾವನೆಯಿಂದ ಮಾತ್ರ. ಇಲ್ಲಿ ಯಾರಿಗೂ ಅವಮಾನ. ನಿಂದನೆ ನಡೆಯುವುದೇ ಇಲ್ಲ. ಆದರೆ ಕನಕದಾಸರನ್ನು ವ್ಯಾಸರಾಯರು ಶ್ರೇಷ್ಠನೆಂದೇ ಕರೆದು, ಹೊಗಳಿದರೂ ಕೂಡ ಅವರನ್ನು ಇತರ ಬ್ರಾಹ್ಮಣ ಶಿಷ್ಯರು ಕನಕದಾಸರನ್ನು ನಡೆಸಿಕೊಂಡದ್ದು ನೋಡಿದರೆ, ನಿಜಕ್ಕೂ ಆಶ್ಚರ್ಯವಾಗುತ್ತದೆ.

ಕಾವ್ಯದಲ್ಲಿ ಬರುವ ಮೇಲುಸ್ತರದ ವ್ಯಕ್ತಿಯೊಬ್ಬ ಕೆಳಸ್ತರದ ವ್ಯಕ್ತಿಯನ್ನು ಒಪ್ಪಿಕೊಂಡಾಕ್ಷಣ ಅದು ವರ್ತಮಾನದಲ್ಲಿ ಸಮಾಜದಲ್ಲಿ ಬದಲಾಗುತ್ತದೆಂಬುದು ಭ್ರಮೆಯಾಗುತ್ತದೆ. ಏಕೆಂದರೆ ಭಾರತೀಯ ಸಾಂಸ್ಕೃತಿಕ ಜೀವನದಲ್ಲಿ ಜಾತಿ, ಮತ, ಧರ್ಮಗಳು ನಾಶವಾಗದಷ್ಟು ಬಲಾಢ್ಯವಾಗಿರುವುದೇ ಕಾರಣ. ಹಾಗಾಗಿ ಕಾವ್ಯ ಪುರಾಣ ಮತ್ತು ವರ್ತಮಾನವನ್ನು ಸ್ಪಂದಿಸುವ ರೀತಿ ಒಂದು ರೋಚಕ ಬಂಡಾಯ ಕಾವ್ಯವಾಗಿದೆ. ಅಂದರೆ, ಅಂದು ಸಮಾಜದ ಧ್ವನಿಯಾದ ಕನಕದಾಸರ ಧ್ವನಿ ಈ ಕಾವ್ಯಧ್ವನಿ.

ಈ ಮೇಲು - ಕೀಳು ಭಾವನೆ ಕೇವಲ ಕನಕದಾಸರ ಕಾಲಕ್ಕೆ ಮಾತ್ರ ಸೀಮಿತವಾಗದೆ, ಅದು ಆಧುನಿಕದ ಯಾಂತ್ರಿಕ ಮತ್ತು ತಾಂತ್ರಿಕ ಸಾಂಸ್ಕೃತಿಕ ಬದುಕಿನಲ್ಲಿಯೂ ಇರುವುದು ಕಂಡುಬರುತ್ತದೆ. ಅಲ್ಲಿ ಕನಕದಾಸರಿಗೊಬ್ಬರಿಗೆ ಆದ

ಅವಮಾನವಲ್ಲ, ಅದು ಇಡೀ ಸಮಾಜಕ್ಕೆ ಆದದ್ದು, ಇಂದು ಸಮಾಜದಲ್ಲಿ ಪ್ರತಿಯೊಬ್ಬರಿಗೂ ಈ ಅನುಭವ ಆಗುತ್ತಿದೆ. "ಇಂದಿನ ಪ್ರಜಾಪ್ರಭುತ್ವ ರಾಷ್ಟದಲ್ಲಿಯೂ ಕೂಡ ಅದು ಏಕತಾನತೆಯನ್ನು ಅಥವಾ ಸಮಗ್ರದ ಐಕ್ಯತಾ ಮನೋಭಾವನೆಯನ್ನು ಕಾಣುವಲ್ಲಿ ಸಾಧ್ಯವಾಗುತ್ತಿಲ್ಲ. ಇಂದಿಗೂ ಶೂದ್ರ ಕಲ್ಪನೆ ಭಾರತೀಯ ಗ್ರಾಮ ಸಮಾಜದಲ್ಲಿ ಅವೈಜ್ಞಾನಿಕದ್ದಾಗಿದ್ದರೆ, ಅದು ನಮ್ಮ ನಾಗರಿಕ ಸಮಾಜದಲ್ಲಿ ರಾಜಕೀಯ, ಧಾರ್ಮಿಕ, ಶೈಕ್ಷಣಿಕಾತ್ಮಕ ಆಡಳಿತವಲಯದಲ್ಲಿಯೂ ಕೂಡ, ಜೊತೆಗೆ ಮತಮಾನ್ಯಗಳು ಇವುಗಳಿಗೆಲ್ಲಾ, ಬೆನ್ನೆಲುಬಾಗಿ ನಿಂತಿರುವುದು ಇಂದಿನ ಇಂತಹ ಶೋಚನೀಯ ಸ್ಥಿತಿಗೆ ಕಾರಣವಾಗಿದೆ" ಈ ಎಲ್ಲಾ ಅಂಶಗಳಲ್ಲಿಯೂ ಜಾತಿ ಮುಖವಾಡಗಳನ್ನು ಧರಿಸಿರುವುದು, ಸಮಾಜದಲ್ಲಿನ ಜನಾಂಗದ ನೆಮ್ಮದಿ, ಶಾಂತಿಯ, ಸಹನೆಯ ಬದುಕಿಗೆ ಅನಾರೋಗ್ಯಕರ ವಾತಾವರಣವಾಗಿ, ಅದು ಎಂದೆಂದಿಗೂ ವಾಸಿಯಾಗದ ಖಾಯಿಲೆಯಾಗಿ ಕಂಡುಬರುತ್ತಿದೆ.

ಕ್ರಿ.ಶ. ೧೦ನೇ ಶತಮಾನದ ಆದಿಕವಿ ಪಂಪ ಕೂಡ **ಮಾನವ ಜಾತಿ ತಾನೊಂದೇ ವಲಂ** ಎಂದು ಹೇಳಿದ. ಆಮೇಲೆ ವಚನಕಾರರು ಚಳವಳಿಯ ಮೂಲಕ ಸಂಪ್ರದಾಯವನ್ನೇ ಬುಡಮೇಲು ಮೇಡಲು ಪ್ರಯತ್ನಿಸಿದರು. ಆದರೆ ಅದು ಪುರೋಹಿತಶಾಹಿಯ ಕಪಿಮುಷ್ಠಿಯಿಂದ ಹೊರಬರಲೇಯಿಲ್ಲ. ೧೬ನೇ ಶತಮಾನದಲ್ಲಿದ್ದ ಕನಕದಾಸರನ್ನು ಈ ವಿಷಯಗಳು ಅತ್ತಾ-ಇತ್ತಾ ಎಳೆದಾಡಿದ್ದು ನಿಜ. ಆದರೆ ಅವರು ಕಾವ್ಯದಲ್ಲಿ ಶ್ರೇಷ್ಠತೆಯನ್ನು ತಂದರೆ ಹೊರತು, ಆ ಕಾವ್ಯವನ್ನು ಓದಿ ಅರ್ಥೈಸಿದವರು ವಿರಳವಾದರು. ಅದು ಜನಸಾಮಾನ್ಯರಲ್ಲಿ ತಲುಪುವಲ್ಲಿ ಕಾವ್ಯ ಸೋಲಲಿಲ್ಲ ಆದರೆ, ಜನಸಾಮಾನ್ಯರು ಅದನ್ನು ಅರಿಯುವಲ್ಲಿ ಸೋಲೊಪ್ಪಿಕೊಂಡಿದ್ದಾರೆ. ಹಾಗೂ ಈ ಜಡ್ಡುಗಟ್ಟಿದ ಈ ವ್ಯವಸ್ಥೆಯನ್ನು ತೊಳೆಯಲು ಸಾಧ್ಯವಾಗಿಲ್ಲ. ಹಾಗೇನಾದರೂ ಮಾಡುವುದಾದರೆ, ಮೊದಲು ಮನುಷ್ಯನ ಮನಸ್ಸನ್ನು ತೊಳೆಯಬೇಕು. ಆದರೆ ಇಂದಿನ ವಿಘಟಿತ ಸಾಂಸ್ಕೃತಿಕ ಜೀವನದಲ್ಲಿ ಸಾಧ್ಯವಾಗಲಾರದು.

ಒಂದು ರೀತಿಯಲ್ಲಿ ಭಾರತೀಯರ ಜನಜೀವನ ಕ್ರಿಸ್ತಪೂರ್ವದಿಂದಲೂ ದಾಸ್ಯ ಮನೋಭಾವನೆಗೆ ಕಾರಣ ಮನುಷ್ಯನಲ್ಲಿರುವ ಈ ಮೇಲು-ಕೀಳು ಭಾವನೆಯೇ ಮುಖ್ಯವಾದದ್ದು. ಸಮಗ್ರ ಭಾರತದಲ್ಲಿ ಭಾರತೀಯರು ಅನಾದಿ ಕಾಲದಿಂದಲೂ ಒಂದಾಗಲಿಲ್ಲ. ಒಂದು ಸಮಾಜವನ್ನು ಕಟ್ಟಿಕೊಳ್ಳುವಲ್ಲಿ ವಿಫಲರಾದರು, ಅದು ಇಂದಿಗೂ ಕೂಡ ಅಸಾಧ್ಯವಾದವಾಗಿಯೇ ಕಂಡುಬರುತ್ತಿದೆ. ಈಗಿನ ಜಾತ್ಯಾತೀತ ರಾಷ್ಟ್ರಕಲ್ಪನೆ ಕೇವಲ ಸಂವಿಧಾನಕ್ಕೆ ಸೀಮಿತವಾಗಿದೆ, ಅದು ಸಮಗ್ರ ಭಾರತೀಯರ ಜೀವನದಲ್ಲಿ ಅಡಕವಾಗಬೇಕಿತ್ತು, ಆದರೆ ಆಗಲಿಲ್ಲ. ಅದೇ ಒಂದು ದೊಡ್ಡ ದುರಂತವಾಗಿ ಇಂದಿಗೂ

ಕೂಡ ಕಂಡು ಬರುತ್ತಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಈ ಕೃತಿ ಪ್ರಸ್ತುತಕ್ಕೂ ಚಿಂತನೆಗೂ, ಯೋಗ್ಯವಾದ ಆಕರವಾಗಿ ನಿಂತಿದೆ.

---

## ಅಧ್ಯಾಯ - ಆರು

# ಉಪ ಸಂಹಾರ

ಕನ್ನಡ ಸಾಹಿತ್ಯದಲ್ಲಿ ಅನೇಕ ವೈಶಿಷ್ಟ್ಯಗಳಿವೆ. ಅಂತಹ ವಿಶಿಷ್ಟತೆಯಲ್ಲಿ ಹರಿದಾಸ ಸಾಹಿತ್ಯ ಕೂಡ ಒಂದು. ಹರಿದಾಸ ಸಾಹಿತ್ಯವೆಂದಾಕ್ಷಣ ಕನ್ನಕ-ಪುರಂದರರು ನೆನಪಿಗೆ ಬರುತ್ತಾರೆ. ಪುರಂದರರು ಏಕಮುಖ ಪ್ರವಾಹದಂತೆ ಹರಿದಾಸ ಸಾಹಿತ್ಯದಲ್ಲಿ ಕಾಣುತ್ತಾರೆ. ಅವರಿಗೆ ಯಾವುದೇ ವಿರೋಧವಿದ್ದಂತೆ ಕಂಡುಬರುವುದಿಲ್ಲ. ಹಾಗಾಗಿ ಅವರು ಒಬ್ಬ ದಾಸರಾದರು. ದಾಸರಾಗಿ ಕೀರ್ತನೆ ರಚಿಸಿದರು. ಹಾಗಾಗಿ ಅವರು ಹರಿದಾಸರಲ್ಲಿ ಮುಖ್ಯರಾಗುತ್ತಾರೆ. ಕನಕದಾಸರಾದರೋ ಹುಟ್ಟುವಾಗಲೇ ದೇವರ ಅನುಗ್ರಹದಿಂದ ಹುಟ್ಟಿದ್ದು, ನಂತರ ಜೀವನದಲ್ಲಿ ತನ್ನವರನ್ನು ಕಳೆದುಕೊಂಡು, ಪಾರಂಪರಿಕವಾಗಿ ತನಗೆ ಬಂದಿದ್ದ ಪದವಿಯನ್ನು ಕಳೆದುಕೊಂಡಿದ್ದು, ಒಂದು ಹಂತ. ಆನಂತರ ಅವನಿಗೆ ಮನೆಯಲ್ಲಿಯೇ ದ್ರವ್ಯ ದೊರೆತು, ಜೀವನ ಸುಧಾರಣೆಗೊಂಡು, ನಂತರ ಅದರಿಂದ ಕಳೆದುಕೊಂಡ ಪದವಿಯನ್ನು ಜನಮನ್ನಣೆಯನ್ನು ಗಳಿಸುತ್ತಾನೆ. ತಿಮ್ಮಪ್ಪ - ತಿಮ್ಮಪ್ಪನಾಯಕನಾದ. ಮತ್ತೆ ಸಮಾಜದಲ್ಲಿ ಜನಪ್ರತಿನಿಧಿಯಾಗಿ, ನಾಯಕ ಪದವಿಯನ್ನು ಮತ್ತೆ ಗಳಿಸಿದ. ಈ ಸಮಯದಲ್ಲಿ ಜನರು ಅವನನ್ನು ಕನಕನಾಯಕನೆಂದೇ ಕರೆಯುವುದು ರೂಢಿಯಾಯಿತು. ಅಂದರೆ ದೇವರ ಅನುಗ್ರಹ - ತಿಮ್ಮ - ತಿಮ್ಮಪ್ಪ - ತಿಮ್ಮಪ್ಪನಾಯಕ - ಕನಕನಾಯಕ - ಈ ಕನಕನಾಯಕ ತನ್ನ ಜ್ಞಾನ ತಿಳಿವಿನಿಂದ ಭೋಗ ಸಂಸ್ಕೃತಿಯಿಂದ ಮೋಕ್ಷವಿಲ್ಲ ಎಂಬುದನ್ನು ಅರಿತು ಭಗವಂತನ ದಾಸನಾಗಿ ಸೇವೆಗೈದರೆ, ಮೋಕ್ಷವಾಗುತ್ತದೆ ಎಂದು ಅರಿತರು. ತನ್ನ ಕಾಲಜ್ಞಾನದಿಂದ ಆತ ಭೋಗ ಜೀವನಕ್ಕೆ ಬೆನ್ನುಮಾಡಿದನು. ಮುಂದೆ ವೈರಾಗ್ಯ-ಮೋಕ್ಷ ಸಂಸ್ಕೃತಿ-ಸೇವಾ ಸಂಸ್ಕೃತಿಯತ್ತಾ ಮುಖಮಾಡಿದ. ಈವರೆಗೆ ಅವನಿಗೆ ಆದ ಅನುಭವಕ್ಕಿಂತ ಈ ಹಂತದಲ್ಲಿ ಬದುಕಿನಲ್ಲಿ ಶಾಂತಿಯನ್ನು ಕಂಡುಕೊಂಡ. **ದೂರದ ಬೆಟ್ಟ ನುಣ್ಣಗೆ** ಎಂದು ತಿಳಿದಿದ್ದ ಕನಕರಿಗೆ ತಕ್ಷಣವೇ ವಾಸ್ತವ ಸಂಗತಿಗಳು ತನ್ನ ಬದುಕಿನಲ್ಲಿ ಎದುರಾದವು. ಅಂದರೆ ದೂರಕ್ಕೆ ಕಂಡ ಬೆಟ್ಟ ಹತ್ತಿರ ಹೋದರೆ ತನ್ನಲ್ಲಿ ಏನೇನನ್ನು ಅಡಗಿಸಿಕೊಂಡಿದೆ ಎಂಬುದು ತಿಳಿಯುತ್ತದೆಯೋ, ಹಾಗೆಯೇ ನಾಯಕ ಪದವಿ ತ್ಯಜಿಸಿದ ಕನಕರಿಗೆ ಸಮಾಜದಲ್ಲಿ ಅಂತಹ ಹೊಂದಾಣಿಕೆಯಿರಲಿಲ್ಲ. ಆದರೆ, ಈತನೆ ಸಮಾಜದಲ್ಲಿನ ಎಲ್ಲವನ್ನೂ ಗಮನಿಸಿ, ಅವುಗಳಿಗೆ ಹೊಂದಿಕೊಳ್ಳಬೇಕಾಗಿತ್ತು. ಈ ಹೊಂದಿಕೊಳ್ಳುವಿಕೆ ಎಂದರೆ ಅಂದಿನ ಸಮಾಜದಲ್ಲಿನ ಅಸಮತೋಲನವನ್ನು ಗಮನಿಸಿ,

ಆದರಲ್ಲಿಯೇ ನೆಲೆ ಕಂಡುಕೊಳ್ಳಬೇಕಾಯಿತು. ಸಮಾಜದಲ್ಲಿನ ಉಚ್ಛ ಮತ್ತು ನೀಚ ವರ್ಗಗಳಿದ್ದು, ಅಲ್ಲಿ ಉಚ್ಛ ವರ್ಗದವರು ನೀಚವರ್ಗದವನ್ನು ಕೀಳಾಗಿ ಕಾಣುತ್ತಿದ್ದುದಲ್ಲದೆ, ಅವರು ಹೇಳಿದನ್ನು ಕೇಳುವಂತೆ ಮಾಡಿಕೊಂಡು, ಪುರೋಹಿತರಾಶಾಹಿಯು ತನ್ನ ಅಧಿಕಾರವನ್ನು ಸಮಾಜದಲ್ಲಿ ವಂಶಪಾರಂಪರ್ಯವಾಗಿ ಸ್ಥಾಪಿಸಿಕೊಂಡು, ಸಮಾಜವನ್ನು, ಶ್ರೀಸಾಮಾನ್ಯರನ್ನು ತನ್ನ ಕಪಿ ಮುಷ್ಠಿಯಲ್ಲಿ ಬಂಧಿಸಿಕೊಂಡು, ಆಡಂಭರ, ಅಂಧಾನುಕರಣೆಯ ಜೊತೆಗೆ ಬ್ರಾಹ್ಮಣೇತರರನ್ನು ಶೋಷಣೆ ಮಾಡುವುದು, ತಮ್ಮ ವರ್ಗವನ್ನು ಬಿಟ್ಟು ಉಳಿದವರು ಅಕ್ಷರ ಜ್ಞಾನದೆಡೆಗೆ ಹರಿಯದಂತೆ ನಿಷೇಧಿಸಿದ್ದರು. ಶೂದ್ರರ ಬದುಕು ಅವರು ನಿಶ್ಚಯಿಸಿದಂತೆ ಎಂಬಂತಹ ಭ್ರಮೆಯಲ್ಲಿ ಕೆಳವರ್ಗದ / ಅಲ್ಪಸಂಖ್ಯಾತರರು ಭಾವಿಸಿದ್ದರು. ಇಂತಹ ಕಾಲದಲ್ಲಿ ಶೂದ್ರ ಸಮಾಜದಲ್ಲಿ, ಪುರೋಹಿತಶಾಯಿಯ ಅಟ್ಟಹಾಸದ ಸನ್ನಿವೇಶದಲ್ಲಿ ಕನಕದಾಸರು ಕತ್ತಲಗರ್ಭವನ್ನು ಸೀಳಿಕೊಂಡು, ಉದಯ ಸೂರ್ಯನಂತೆ ತನ್ನ ಪ್ರಶಾಂತ ಸುವರ್ಣ ಕಿರಣವನ್ನು ಸಮಾಜದಲ್ಲಿ ಚೆಲ್ಲುತ್ತಾ, ಸಮಾಜವನ್ನು ಉನ್ನತೀಕರಿಸಲೋಸುಗವಾಗಿ, ಅವತಾರಪುರುಷರಾಗಿ, ಪವಾಡ ಪುರುಷರಾಗಿ ಕನಕನಾಯಕನು ದಾಸ ಸಂಸ್ಕೃತಿಯತ್ತ ಹೆಜ್ಜೆಹಾಕಿದರು.

ಅವರು ದಾಸ ಸಂಸ್ಕೃತಿಯತ್ತ ಬರುವ ಮುನ್ನವೇ ಅವರ ಮನಸ್ಸು ಪಕ್ವವಾಗಿದ್ದು, ಯುದ್ಧ ಸಂಸ್ಕೃತಿಯನ್ನು ತ್ಯಜಿಸಿ, ವೈರಾಗ್ಯ ಸಂಸ್ಕೃತಿಯತ್ತ ಹೆಜ್ಜೆ ಹಾಕಿದ್ದರು. ಅವರು ಅರಿವಿನಿಂದ ಮಹಾಜ್ಞಾನಿಯಾಗಿದ್ದರು. ಅನುಭವದಿಂದ ಮಹಾ ಸಂತರಾಗಿದ್ದರು. ಸಮಾಜದಲ್ಲಿನ ಅಸಮಾನತೆಯನ್ನು ಹತ್ತಿರದಿಂದ ಕಂಡ ಮಹಾದಾರ್ಶನಿಕರಾಗಿದ್ದರು. ಮೇಲಾಗಿ ವಿಷ್ಣುವಿನ ಅವತಾರ ಮುಖಗಳಿಗೆಲ್ಲಾ ಅನನ್ಯ ಭಕ್ತರಾಗಿದ್ದರು. ಇದಕ್ಕೆ ಉಡುಪಿಯ ಕೃಷ್ಣಮಂದಿರವೇ ಇಂದಿಗೂ ಸಾಕ್ಷಿ. ದಾಸರು ಸಮಾಜದಲ್ಲಿ ಅವಮಾನ, ಅವಹೇಳನ, ನಿಂದನೆಗಳ ಜೊತೆಗೆ ಶೂದ್ರನೆಂಬ ಹಣೆಪಟ್ಟಿ - ಇತ್ಯಾದಿ ಅಂಶಗಳು ಅವರ ಜೀವನದುದ್ದಕ್ಕೂ ದಿನಚರಿಯಾದವು. ಎಲ್ಲಾ ಅಂಶಗಳನ್ನು ಮನದಲ್ಲಿ ಮಥಿಸಿ - ಚಿಂತಿಸಿ, ಆಲೋಚಿಸಿದ ದಾಸರು ತನ್ನ ಸಾಹಿತ್ಯದಲ್ಲಿ ಎಲ್ಲವನ್ನೂ ದಾಖಲಿಸುತ್ತಾ, ಮುಂದುವರೆಯುತ್ತಾರೆ.

ಅಂದಿನ ಜನಜೀವನದಲ್ಲಿದ್ದ ಸಾಮಾಜಿಕ ಸಮಸ್ಯೆಯಾದ ವರ್ಗಕಲಹ, ಜಾತಿ ಸಮಸ್ಯೆಗಳನ್ನು ಮಡಿ-ಮೈಲಿಗೆಗಳನ್ನು ಈ ಕೃತಿಯಲ್ಲಿ ಅವರು ಧಾನ್ಯಗಳ ಸಂಕೇತಗಳ ಮೂಲಕ ತಮ್ಮ ಅನುಭವವನ್ನು ಈ ಕಾವ್ಯದಲ್ಲಿ ಸೃಷ್ಟಿಸಿದ್ದಾರೆ.

ಈ ಕಾವ್ಯ ಅವರ ವ್ಯಕ್ತಿತ್ವಕ್ಕೆ, ಅವರ ಸಾಧನೆಯ ಬದುಕಿಗೆ ಅವರ ಕಾಲಘಟ್ಟವೇ ನೀಡಿದ, ನಿರ್ಧರಿಸಿದ ಮಹಾಸಾಕ್ಷ್ಯವಾಗಿದೆ. ಇಲ್ಲಿ ಕನಕದಾಸರು ಮಹಾತ್ಮರಾಗುತ್ತಾರೆ.

ಕಾವ್ಯದಲ್ಲಿನ ಪ್ರಸಂಗಗಳು ಬ್ರಾಹ್ಮಣರಿಗಿಂತ ಅತ್ಯುನ್ನತ ಸ್ಥಾನ ಕಲ್ಪಿಸಿಕೊಡುವಲ್ಲಿ, ಹಾಗೂ ಕನಕದಾಸರನ್ನು ಒಬ್ಬ ಮಹಾಜ್ಞಾನಿಯಾಗಿ, ಪವಾಡ ಪುರುಷನನ್ನಾಗಿ ನಿರ್ಮಿಸುವಲ್ಲಿ, ಮುಖ್ಯವಾದವು.

ರಾಮಧಾನ್ಯ ಚರಿತೆಯು ದೌರ್ಜನ್ಯದ ನಡವಳಿಕೆಗಿಂತ ಮಾನವರೊಳಗೆ ಮಾನವೀಯ ಸಂಬಂಧವನ್ನು ಗಟ್ಟಿಗೊಳಿಸುವಲ್ಲಿ, ಹಾಗೂ ಅಸಹಾಯಕ ಜನಸಾಮಾನ್ಯರ ಆಧಾರವಾಗಿ ಮತ್ತು ಸಮಾಜದಲ್ಲಿ ಸಹಬಾಳ್ವೆಯ ಮೂಲ ಮಂತ್ರವಾಗಬೇಕು ಎನ್ನುವುದೇ ಕೃತಿಯ ಆಶಯ.

ಈ ಕಾವ್ಯವು ಪುರಾಣ ಪ್ರತಿಮೆಗಳ ಮೂಲಕ ಅಲ್ಲಿ ಜನ ಮನ್ನಣೆಗಿಂತ ವಿಷಯವನ್ನು ಸಮಾಜಕ್ಕೆ ತಲುಪಿಸುವಲ್ಲಿ ಹಾಗೂ ಸಮಾಜದ ತಾರತಮ್ಯ ಭಾವನೆಯನ್ನು ವಿರೋಧಿಸುವುದು ಎಂದರೆ, ಅತಿಶಯೋಕ್ತಿಯಾಗಲಾರದು.

ಇದುವರೆಗೂ ಶ್ರೇಷ್ಠ ಕುಲ ಸಂಜಾತನೆಂದೂ, ಮಡಿವಂತನೆಂದೂ ಬೀಗುತ್ತಿದ್ದ ನೆಲ್ಲು, ಕನಿಷ್ಠ ಕುಲ ಸಂಜಾತನಾದರೂ ಮತೀವಂತನಾದ ರಾಗಿ ಜೊತೆಯಲ್ಲಿ ಮೈಗೆ ಮೈ ತಾಕುವಂತೆ ನಿಷ್ಪಾದೇವಿಯ ಮಡಿಲಲ್ಲಿ ಸೇರಿದ್ದು ತುಂಬ ಧ್ವನಿಪೂರ್ಣವಾಗಿದೆ. ಸದ್ದಿಲ್ಲದೆ ತಾರತಮ್ಯರಹಿತ ಸಮಾನತೆಯನ್ನು ತಂದಿರುವ ರೀತಿ ಸೊಗಸಾಗಿದೆ.

ತನಗಾದ ಎಲ್ಲಾ ಅಪಮಾನ, ನಿಂದನೆಗಳನ್ನು ಮನವೆಂಬ ಮಡಿಕೆಯಲ್ಲಿ ಸುರಿದು, ಬುದ್ಧಿ ಎಂಬ ಕಡೆಗೋಲನಿಂದ ಕಡೆದು, ತೆಗೆದ ನವನೀತವೆ ಅವರ ಸಾಮಾಜಿಕ, ಬಂಡಾಯದ ಧ್ವನಿಯಾದ, ಆತ್ಮಚರಿತ್ರೆಯಾಗಿರುವ ರಾಮಧಾನ್ಯ ಚರಿತೆಯನ್ನು ಸಾಹಿತ್ಯ ಜಗತ್ತಿಗೆ ನೀಡಿದ್ದಾರೆ.

ಅಂದರೆ, ಅಂದಿನ ಪುರೋಹಿತಶಾಹಿಯ ದಬ್ಬಾಳಿಕೆಯಲ್ಲಿ ಶೂದ್ರನೊಬ್ಬ ಧ್ವನಿ ಮಾಡಿದ್ದು, ಬ್ರಾಹ್ಮಣರಿಗೆ ನುಂಗಲಾರದ ತುತ್ತಾಗಿತ್ತು. ಅಂತಹ ಪರಿಸ್ಥಿತಿಯಲ್ಲಿ ಅವರು ಭಗವಂತನ ಅನನ್ಯ ಭಕ್ತರಾಗಿಯೂ ಕೂಡ, ಸಮಾಜದ ಅಸಮಾನತೆಗೆ ಬಂಡಾಯದ ಧ್ವನಿಯಾದರು. ಈ ಸಮಯದಲ್ಲಿ ಅವರಿಗೆ ಅಪಾರವಾದ ಅಪಮಾನ, ನಿಂದನೆಗಳು ಸಾಲುಗಟ್ಟಿದ್ದವು. ಅಂತವುಗಳನ್ನು ಅವರು ಎದುರಿಸಿ, ಸಮಾಜದಲ್ಲಿ ಮುನ್ನಡೆದರು. ಸಮಾಜದಲ್ಲಿನ ಅಸಮಾನತೆಗೆ ಬ್ರಾಹ್ಮಣರ ಬ್ರಾಹ್ಮಣ್ಯದ ವಿರೋಧಿಯಾಗಿದ್ದರು. ಆದ್ದರಿಂದಲೇ ಕನಕದಾಸರು ಸಾಧನೆಯಲ್ಲಿ ಮೇಲೇರಲು ಸಾಧ್ಯವಾಯಿತು.

ಬ್ರಾಹ್ಮಣರಲ್ಲದೆ ಇತರೆ ಯಾವ ಜನಾಂಗವು ಕೂಡ ಸಾಹಿತ್ಯ ಸೃಷ್ಟಿಸಲು ಅರ್ಹರಲ್ಲ. ತಾವು ಮಾತ್ರ ಅರ್ಹರು ಎಂದು ಭಾವಿಸಿದ್ದ ಪುರೋಹಿತ ಶಾಯಿಯ ಕಟ್ಟುಪಾಡುಗಳನ್ನು ಮಣ್ಣುಪಾಲು ಮಾಡಿ ಕನಕದಾಸರು ಸಾಹಿತ್ಯ ಸೃಷ್ಟಿಯತ್ತ ದೃಷ್ಟಿ ಹರಿಸಿದರು. ಸಾಹಿತ್ಯ ರಚನೆಗೆ ಕನಕದಾಸರ ಕಾಲವೇ ಅಲ್ಲ, ಅದು ೨೦ನೇ ಶತಮಾನದಲ್ಲಿದ್ದ ಕನ್ನಡದ ಮಹಾಕವಿಗೂ ಕುವೆಂಪು ಅವರಿಗೂ ಕೂಡ ಶೂದ್ರತ್ವದ ಬಿಸಿ ತಟ್ಟಿತೆನ್ನಬಹುದು. ಆಧುನಿಕ ಜಗತ್ತಿನಲ್ಲಿದ್ದು ನಯ-ನಾಗರಿಕತೆಯಲ್ಲಿದ್ದು ಕೂಡ ಶೂದ್ರತನವನ್ನು ಕುವೆಂಪು ಅವರು ಅನುಭವಿಸಿದ್ದಕ್ಕೆ ನೆನಪು ಮಾಡಿಕೊಂಡರೆ, ಕನಕದಾಸರ ಕಾಲದಲ್ಲಿ ಹೇಗಿತ್ತು ಪರಿಸ್ಥಿತಿ, ಅದನ್ನು ಕನಕದಾಸರು ಹೇಗೆ ಎದುರಿಸಿದರು ಎನ್ನುವುದನ್ನು ಊಹಿಸಲು ಅಸಾಧ್ಯವಾದದ್ದು. ಈ ಎಲ್ಲಾ ಅಡೆ-ತಡೆಗಳನ್ನು ದಾಟಿ ಸಮಾಜದಲ್ಲಿ ಮುನ್ನಡೆದದ್ದು ಮಾತ್ರ ಕನಕನ ಹಿರಿಮೆಯಾಗಿದೆ. ಆದ್ದರಿಂದ ಇಂದಿನ ಆಧುನಿಕ ಯುಗದಲ್ಲಿಯು ಕೂಡ ಜಾತಿ, ಮತಗಳ ಹಾವಳಿ ಎಲ್ಲಾ ಹಂತಗಳಲ್ಲಿಯೂ ಅಂದರೆ, ಅಧಿಕಾರ, ಧಾರ್ಮಿಕ, ಸಾಮಾಜಿಕ ಸಂಸ್ಥೆಗಳಲ್ಲಿ, ರಾಜಕೀಯದಲ್ಲಿ ಈ ಜಾತಿ ಎನ್ನುವ ಭೂತ ತನ್ನ ಸದೃಢವಾದ ಬಾಹುಗಳನ್ನು ಚಾಚಿರುವುದು ಕಂಡುಬರುತ್ತದೆ. ಆದ್ದರಿಂದಲೇ ಕನಕದಾಸರು ಅಂದಿನ ಕಾಲಕ್ಕೆ ಮಾತ್ರವಲ್ಲದೆ, ಇಂದಿನ ಸಮಾಜಿಕರ ಧ್ವನಿಯಾಗಿ, ಬಂಡಾಯದ ಮನೋಧರ್ಮವನ್ನಾಳುವವರ ಶಕ್ತಿಯಾಗಿ ಸಮಾಜದ ಪ್ರತಿನಿಧಿಯಾಗಿದ್ದಾರೆ. ಇಂದಿಗೂ ಕುಡ ಹಿಂದುಳಿದವರ, ಅಲ್ಪಸಂಖ್ಯಾತರ, ಶೋಷಿತರ ಪರವಾದ ಹೆಗ್ಗುರುತಾಗಿ ಈ ಕಾವ್ಯ ನಿಲ್ಲುತ್ತದೆ.

ಆದ್ದರಿಂದ ಈ ಕಾವ್ಯವನ್ನು ಅಧ್ಯಯನ ಮಾಡಲು, ಎಲ್ಲಾ ಮಗ್ಗುಲುಗಳಿಂದ ಚಿಂತಿಸಲು, ಆಲೋಚಿಸಲು, ಅದರಲ್ಲಿ ಹೊಳೆದದ್ದನ್ನು ದಾಖಲಿಸಲು ನಾನು ಪ್ರಯತ್ನಿಸಿರುತ್ತೇನೆ.

ಕನಕದಾಸರು ಬದುಕಿದ್ದ ಕಾಲಘಟ್ಟ ೧೫-೧೬ನೇ ಶತಮಾನದಲ್ಲಿಯಾದರೂ, ಅವರ ಸಾಹಿತ್ಯ ಕೃತಿಗಳು ಇಂದಿನ ೨೧ನೆಯ ಶತಮಾನದ ಪ್ರಸ್ತುತ ಮಾನವ ಸಮಾಜಕ್ಕೆ ಚಿಂತಿಸುವ, ಆಲೋಚಿಸುವ ಪರಿಯನ್ನು ಉಳಿಸಿವೆ ಮತ್ತು ಪುರಾಣಕಾಲದಿಂದಲೂ ಬೆಳೆಯುತ್ತಲೇ ಇಂದಿನವರೆಗೂ ಬಂದಿವೆ. ಇಂದಿನ ಮಾನವನ ಬದುಕಿನಲ್ಲಿ ಇರುವ ಸಮಸ್ಯೆಗಳನ್ನು ಚಿಂತಿಸಿ, ಚರ್ಚಿಸಲು ಮತ್ತು ಮನುಷ್ಯರ ಮನಸ್ಸನ್ನು ಆಕರ್ಷಿಸುವಲ್ಲಿ, ಪರಿಪೂರ್ಣ ಆಕರಗಳಾಗಿ ಅವರ ಸಾಹಿತ್ಯ ಕೃತಿಗಳು ನಿಲ್ಲುತ್ತವೆ. ಅದರಲ್ಲಿಯು ಇಂದಿನ ಮಾನವ ಬದುಕನ್ನು ಆತ್ಮ ವಿಮರ್ಶೆ ಮಾಡಿಕೊಳ್ಳಲು ಅವರ **ರಾಮಧಾನ್ಯ ಚರಿತೆ** ಬಹು

ಮುಖ್ಯ ಆಕರವಾಗಿದೆ. ಕೃತಿಯ ಸಮಾಜದ ಅಶಾಂತಿಯನ್ನು ಚಿಂತಿಸುವಂತೆ ಪದೇ ಪದೇ ಆಲೋಚನೆಗೀಡುಮಾಡುವಲ್ಲಿ ಮಹಾ ಸಾಕ್ಷ್ಯಾಧಾರವಾಗಿ ಈ ಕಾವ್ಯ ನಿಲ್ಲುತ್ತದೆ.

—

## ಗ್ರಂಥಋಣ


1. ಕನಕ ಸಾಹಿತ್ಯ ದರ್ಶನ ಭಾಗ-1 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ 1990
2. ಕನಕ ಸಾಹಿತ್ಯ ದರ್ಶನ ಭಾಗ-2 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ 1991
3. ಕನಕ ಸಾಹಿತ್ಯ ದರ್ಶನ ಭಾಗ-3 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ 1999
4. ಕನಕ ಕಿರಣ, ಸಂ. ಕಾ.ತ. ಚಿಕ್ಕಣ್ಣ, ಕಾಳಿದಾಸ ಸಾಂಸ್ಕೃತಿಕ ಸಂಘ, ವಿಜಯನಗರ, ಬೆಂಗಳೂರು - 1982
5. ಕವಿ ಪರಂಪರೆ - ವಿಮರ್ಶೆ ಸಂಪುಟ-3, ವಿ.ಸೀ., ಬಿ.ಎಂ.ಶ್ರೀ. ಪ್ರತಿಷ್ಠಾನ, ನ.ರಾ. ಕಾಲೋನಿ, ಬೆಂಗಳೂರು
6. ವಿಶ್ವಮಾನವ ಕನಕದಾಸರು ಮತ್ತು ಹರಿಭಕ್ತಿಸಾರ, ಯೋಗಾನರಸಿಂಹ ಕನಕಸಾಹಿತ್ಯ ಪ್ರತಿಷ್ಠಾನ (ರಿ), ಬೆಂಗಳೂರು
7. ಬಹುಮುಖ ಚಿಂತನೆ - ಡಾ। ಹೆಚ್.ಜೆ. ಲಕ್ಕಪ್ಪಗೌಡ
8. ನಿಶ್ಶಬ್ದದ ಜಾಡು - ಪ್ರೊ। ಎಸ್.ಜಿ. ಸಿದ್ಧರಾಮಯ್ಯ, ಸುಮುಖ ಪ್ರಕಾಶನ, ಬೆಂಗಳೂರು - 2005
9. ಕರ್ನಾಟಕದಲ್ಲಿ ದಾಸ ಸಾಹಿತ್ಯ, ಕೂ.ಗಿ. ಗಿರಿಯಪ್ಪ, ಮಧು ಪ್ರಕಾಶನ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ - 2001
10. ಪುರಂದರದಾಸರ ಜನಪ್ರಿಯ ಕೀರ್ತನೆಗಳು ಸಂ. ಡಾ। ಶ್ರೀನಿವಾಸ ಹಾವನೂರು, ಅಂಕಿತ ಪುಸ್ತಕ, ಬೆಂಗಳೂರು - 2002
11. ಸಾಹಿತ್ಯನಂದನ, ನಿರ್ದೇಶಕರು, ಮುದ್ರಣಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು - 2005
12. ತನ್ನತಾವು - ಡಾ। ಹಿ.ಶಿ. ರಾಮಚಂದ್ರೇಗೌಡ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು - 2003
13. ಹರಿದಾಸರು ಕಂಡಂತೆ - ಶಾಂತಿಪ್ರಿಯ, ಶ್ರೀಕೃಷ್ಣ ಬುಕ್ ಏಜೆನ್ಸಿ, ಬೆಂಗಳೂರು - 2002
14. ಕನಕದಾಸರು ಡಾ। ಎನ್.ಕೆ. ರಾಮಶೇಷನ್, ಸಪ್ನ ಬುಕ್‌ಹೌಸ್, ಬೆಂಗಳೂರು - 2002
15. ಹರಿದಾಸ ಸಾಹಿತ್ಯ ಸಮರ್ಪಣೆ, ಬಿ.ಹೆಚ್.ಎಸ್. ಪ್ರಥಮದರ್ಜೆ ಕಾಲೇಜು, ಬೆಂಗಳೂರು-2005
16. ಶ್ರೀ ಕನಕದಾಸರು - ಡಾ। ಬಸವರಾಜ ನಾಯ್ಕರ್, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ - 2006
17. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ. ಮುಗಳಿ, ಗೀತಾ ಬುಕ್‌ಹೌಸ್, ಮೈಸೂರು - 2007
18. ಒಡನಾಟ - ಸಿ.ಬಿ. ಹೊನ್ನಯ್ಯ, ಜೈಭೀಮ್ ಪ್ರಕಾಶನ, ಮಳವಳ್ಳಿ, ಮಂಡ್ಯ - 1997
19. ಕನಕದರ್ಶನ - ದೇಜಗೌ. ತನುಮನ ಪ್ರಕಾಶನ, ಮೈಸೂರು - 2003
20. ಕನಕದಾಸರ ರಾಗಿ-ರಾಮಾಯಣದರ್ಶನ, ಸುಧಾಕರ, ಪ್ರತಿಭಾ ಪ್ರಕಾಶನ, ಮೈಸೂರು-2001
21. ದಾಸ ಸಾಹಿತ್ಯ ಮತ್ತು ಸಂಸ್ಕೃತಿ, ಸಾ.ಕೃ. ರಾಮಚಂದ್ರರಾವ್, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - 2003
22. ಹರಿದಾಸ ಸಾಹಿತ್ಯ - ಪ್ರೊ। ಅಬ್ದುಲ್ ಬಷೀರ್, ವಸಂತ ಪ್ರಕಾಶನ, ತುಳಸಿವನಂ, ಬೆಂಗಳೂರು-2001
23. ಕನ್ನಡ ಸಾಹಿತ್ಯಕೋಶ, ಸಂ। ರಾಜಪ್ಪದಳವಾಯಿ, ದಳವಾಯಿ ಎಜುಕೇಷನಲ್ ಅಂಡ್ ಸೋಶಿಯೊ ಕಲ್ಚರ್ - 1996
24. ದಾಸಶ್ರೇಷ್ಠ ಕನಕದಾಸರ ರಾಮಧಾನ್ಯ ಚರಿತೆ, ಕೆ.ಬಿ. ತಳಗೇರಿ, ವಿದ್ಯಾನಿಧಿ ಪ್ರಕಾಶನ, ಗದಗ-1998


—

